★ ನೀರದ ಸಾಹಿತ್ಯ ಪ್ರಕಟಣೆ ಸಮಿತಿ, ಸಾಧನಕೇರಿ, ಧಾರವಾಡ.

ಸಂಪಾದಕ ಮಂಡಲ

೧ ರಂ. ಶ್ರೀ. ಮುಗಳಿ.

೨. ಮಿರ್ಜಿ ಅಣ್ಣಾರಾಯರು.

೩. ವರದರಾಜ ಹುಯಿಲಗೋಳ.



★ ಮಾರಾಟಗಾರರು.

೧. ಮನೋಹರ ಗ್ರಂಥಭಾಂಡಾರ, ಧಾರವಾಡ.

೨. ಹೊಂಬಾಳಿ ಬಂಧುಗಳು, ಗದಗ ಮತ್ತು ಹುಬ್ಬಳ್ಳಿ

ಮುದ್ರಕರು
ಹೊಂಬಾಳಿ ಬಂಧುಗಳು,
ಗದಗ.

ಪ್ರಕಾಶಕರು
ವರದರಾಜ ಹುಯಿಲಗೋಳ
( ನೀರದ ಸಾಹಿತ್ಯ ಸಮಿತಿ ಪರವಾಗಿ )



# ಬಾಗಿಲದಿ

## ಅರ್ಪಣೆ

ಮೊದಲಿನಿಂದಲೂ ಮಮತೆಯಿಂದ ಹರಸಿದ
ಬಾಳದೇಗುಲದ ದರ್ಶನವನು ತೋರಿಸಿದ

ಶ್ರೀ. ವಿ. ಕೃ. ಗೋಕಾಕ ಅವರಿಗೆ

## ಬಾಗಿಲ ತೆರೆಯುವ ಮುನ್ನ

# ಮುನ್ನುಡಿ

ಮುನ್ನುಡಿಯನ್ನು ಬರೆಯಿಸುವುದೂ ಬರೆಯುವುದೂ ಇಂದು ಹಲವರ ಟೀಕೆಗೆ ಗುರಿಯಾದ ವಿಷಯವಾಗಿದ್ದರೂ, ಮುನ್ನುಡಿಯನ್ನು ಬರೆಯಿಸುವವರೂ ಇದ್ದಾರೆ; ಬರೆಯುವವರೂ ಇದ್ದಾರೆ. ಒಂದು ಅಭಿರುಚಿಯವರು ಇನ್ನೊಂದು ಬಗೆಯ ಅಭಿರುಚಿಯವರನ್ನು ಟೀಕಿಸುವುದು ಸಾಮಾನ್ಯರದೊಂದು ಸ್ವಭಾವವೇ ಆಗಿದೆ. ಮುನ್ನುಡಿ ಬೇಕಾಗದಿರುವವರು ತಮ್ಮ ಗ್ರಂಥಗಳನ್ನು ಹಾಗೆಯೇ ಪ್ರಕಟಿಸಬಹುದು. ಬೇರೆ ಬೇರೆ ಕಾರಣಗಳ ಮೂಲಕ ತಮ್ಮ ಕೃತಿಗಳಿಗೆ ಇನ್ನೊಬ್ಬರಿಂದ ಮುನ್ನುಡಿಯನ್ನು ಬರೆಯಿಸಿದರೆ ಅದರಲ್ಲಿ ತಪ್ಪೇನಿದೆ? ಲೇಖಕನ ವಿಷಯಕವಾದ ಪ್ರೀತಿಯಿಂದಲೋ ವಿಶ್ವಾಸದಿಂದಲೋ ಮುನ್ನುಡಿಕಾರರು ತಮ್ಮ ಬರೆಹದಲ್ಲಿ ಒಂದೆರಡು ಒಳ್ಳೆಯ ಮಾತುಗಳನ್ನೇ ಹೆಚ್ಚಾಗಿ ಆಡಿದರೆನ್ನಿ, ಕೃತಿಯಲ್ಲಿಯ ದೋಷಗಳನ್ನೇ ಎತ್ತಿ ತೋರಿಸಲಿಲ್ಲವೆನ್ನಿ! ಈ ಅವರ ಸಹಾನುಭೂತಿಯ ದೃಷ್ಟಿ ಕುತ್ಸಿತ ಟೀಕೆಗೆ ಒಳಗಾಗಬೇಕಾದ ಕಾರಣವೇನೂ ಇಲ್ಲ. ಪ್ರಕಟವಾದ ಪುಸ್ತಕವು ಸಹೃದಯರ ಕೈಗೆ ಬಂದೇ ಬರುವುದು. ಅದರ ಸ್ಥಾನಮಾನಗಳ ನಿರ್ಣಯವನ್ನು ಅವರು ಮಾಡಿಯೇ ಮಾಡುವರು. ಮುನ್ನುಡಿಕಾರನ ಒಂದೆರಡು ಸಹಾನುಭೂತಿಯ ಮಾತುಗಳಿಂದ ಮೂಲ ಕೃತಿಯಲ್ಲಿಯ ಗುಣಗಳಿಗೆ ಹಿಗ್ಗೂ ಇರದು; ಕುಗ್ಗೂ ಇರದು. ಶ್ರೀಮಾನ್ ವರದರಾಜರು ಮುನ್ನುಡಿ ವಿಷಯಕವಾದ ಟೀಕೆಯ ಮಾತುಗಳನ್ನು ಲಕ್ಷ್ಯಕ್ಕೆ ತಾರದೆ, ತಮ್ಮ ಈ ಕಥಾ ಸಂಕಲನಕ್ಕೆ ಮುನ್ನುಡಿ ಬರೆಯಲು ಹೇಳಿದರು. ಅವರ ವಿಷಯಕವಾದ ಪ್ರೀತಿಯ ಮೂಲಕ, ನಾನು ಮುನ್ನುಡಿಯನ್ನು ಬರೆದುಕೊಡಲಿಕ್ಕೆ ಒಪ್ಪಿಕೊಂಡುಬಿಟ್ಟೆ.

ಈ ಸಂಕಲನದಲ್ಲಿ ಎಂಟು ಸಣ್ಣ ಕತೆಗಳು ಇವೆ. ಎಲ್ಲ ಕತೆಗಳೂ ಸಮಾಜದಲ್ಲಿಯ ವ್ಯಕ್ತಿಗಳ ಬೇರೆ ಬೇರೆ ಸ್ವಭಾವ, ಮನೋಧರ್ಮಗಳು ವಸ್ತುಗಳಾಗಿ ನಿಂತಿವೆ. ಹೆಣ್ಣು-ಗಂಡಿನ ಸಂಬಂಧವಾದ ಹೆಣ್ಣುಗಂಡಿನ ಮನದ ಹರಿದಾಟ-ಹೊಯ್ದಾಟಗಳು, ಈಗಾಗಲೇ ಎಷ್ಟು ಕತೆಗಳನ್ನು ಹುಟ್ಟಿಸಿವೆಯೋ–ಇನ್ನೂ ಎಷ್ಟೆಷ್ಟು ಕತೆಗಳನ್ನು ಹುಟ್ಟಿಸಲಿರುವವೋ- ಅವು

ಗಳಿಗೆ ಆದಿ-ಅಂತ್ಯವೇ ಇಲ್ಲದಂತಾಗಿದೆ. ಹೆಣ್ಣು-ಗಂಡಿನ ಸಂಬಂಧ ವಿಚಾರ, ನಮ್ಮ ಜೀವನದಲ್ಲಿ ಅತಿ ಪ್ರಮುಖವಾದುದಾಗಿದೆ. ಈ ವಿಚಾರ ಎಲ್ಲರಿಗೂ ಪರಿಚಯದ್ದಾದರೂ ಎಲ್ಲರೆದುರೂ ಹಲವು ಬಗೆಯ ಸಮಸ್ಯೆಗಳನ್ನು ತಂದೊಡ್ಡುವಂತಹದಾಗಿದೆ. ಆದುದರಿಂದ ಯಾವ ಲಲಿತಸಾಹಿತ್ಯ ಲೇಖಕನ ನಿರ್ಮಿತಿಯ ಬಹುಭಾಗವೂ ಈ ಹೆಣ್ಣುಗಂಡಿನ ಸಂಬಂಧ ಸಮಸ್ಯೆ ಗಳನ್ನು ಚಿತ್ರಿಸಿ ತೋರಿಸುವಂತಹದೇ ಆಗಿರುತ್ತದೆ. ಪ್ರಸ್ತುತ ಸಂಕಲನದ ಲ್ಲಿಯೂ ಇಂತಹ ಸಮಸ್ಯೆಯನ್ನು ಚಿತ್ರಿಸುವ ಕತೆಗಳೇ ಹೆಚ್ಚಾಗಿವೆ.

ವಿಜ್ಞಾನದ ಪ್ರಗತಿಯಿಂದು ದೂರದ ಪ್ರದೇಶಗಳನ್ನೇ ಹತ್ತಿರವಾಗಿಸಿದೆ. ಹಲವು ತಾರಕ-ಮಾರಕ ಶಕ್ತಿಗಳನ್ನು ಒದಗಿಸಿಕೊಟ್ಟಿದೆ. ಜಗತ್ತಿನ ಆಗುಹೋಗುಗಳ ಪರಿಣಾಮವು, ಎಲ್ಲ ಭಾಗದ ಪ್ರತಿಯೊಂದು ವ್ಯಕ್ತಿಯ ಜೀವನದ ಮೇಲೂ ಆಗುವಂತೆ ಮಾಡಿದೆ. ಆದುದರಿಂದಲೇ ಕಳೆದ ಎರಡು ಮಹಾಯುದ್ಧಗಳಿಂದ ಹೊರಹೊಮ್ಮಿದ ಆರ್ಥಿಕ ಕ್ರಾಂತಿ-ವೈಚಾರಿಕ ಕ್ರಾಂತಿ ಗಳು, ಪ್ರತಿಯೊಂದು ಪ್ರದೇಶದ ಸಾಮಾಜಿಕ ಸಂಪ್ರದಾಯಗಳಲ್ಲಿ ಉಲ್ಲೋಲ-ಕಲ್ಲೋಲವನ್ನೇ ಎಬ್ಬಿಸಿಬಿಟ್ಟಿವೆ. ಎಲ್ಲಿ ನೋಡಿದಲ್ಲಿ, ಹಳೆಯ ಸಾಮಾಜಿಕ ಸಂಪ್ರದಾಯಗಳು ಕಣ್ಮರೆಯಾಗುತ್ತಿರುವುದು ಕಂಡುಬರುತ್ತದೆ. ಎಲ್ಲಕಡೆಗಳಲ್ಲಿಯಂತೆ ನಮ್ಮ ನಾಡಿನಲ್ಲಿಯೂ ಸಾಮಾಜಿಕ ಕ್ರಾಂತಿ ತಲೆ ಯೆತ್ತಿಕೊಂಡು ನಿಂತಿದ್ದರೆ, ಅದಕ್ಕಾಗಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ; ವಿಷಾದಪಡಬೇಕಾಗಿಲ್ಲ. ಇದೊಂದು ನಿಸರ್ಗಶಕ್ತಿಯ ಕೈವಾಡ.

ಹೆಣ್ಣುಗಂಡಿನ ಸಂಬಂಧವು ನಮ್ಮ ನಾಡಿನಲ್ಲಿ ಸಾಂಪ್ರದಾಯಕ ನೀತಿ ನಿಯಮಗಳ ಕಟ್ಟಿಗೊಳಗಾಗಿರುವಾಗ, ಸಾಮಾನ್ಯರ ಕಣ್ಣಿಗೆ ಅದು ಅಷ್ಟೊಂದು ಸಮಸ್ಯಾತ್ಮಕ ವಿಷಯವಾಗಿ ಕಂಡಿರಲಿಲ್ಲ. ಇಂದಿನ ಶಿಕ್ಷಣದ ರೀತಿ, ಜೀವನದ ಬಗೆ, ವ್ಯಕ್ತಿ ವ್ಯಕ್ತಿಗಳ ವಿಚಾರ ಸ್ವಾತಂತ್ರ್ಯ, ಆರ್ಥಿಕ ವಿಷಮತೆ ಇವೆಲ್ಲ ಸೇರಿಕೊಂಡು ಇಂದು, ಹೆಣ್ಣು–ಗಂಡಿನ ಸಂಬಂಧವನ್ನು ಬಿಡಿಸಲಾರದಂತಹ ಮಹಾ ಸಮಸ್ಯೆಯನ್ನು ಮಾಡಿ ಒಗೆದಿವೆ. ವ್ಯವಹಾರಿಕ ಬುದ್ಧಿ ಭಾವನಾತ್ಮಕ ಹೃದಯವನ್ನು ಮೆಟ್ಟಿ ತುಳಿದು ನಿಂತುದರಿಂದ, ಈ ಮಹಾ ಸಮಸ್ಯೆ ಹೆಚ್ಚು ಹೆಚ್ಚಾಗಿ ರುದ್ರ ಸ್ವರೂಪವನ್ನು ಧಾರಣಮಾಡುತ್ತ

ನಡೆದಿದೆ. **'ಬಾಗಿಲು ತೆರೆದಿತ್ತು'** ಎಂಬ ಮೊದಲನೆಯ ಕತೆಯು ಅಂತಹ ರುದ್ರಸ್ವರೂಪದ ದರ್ಶನವನ್ನು ಮಾಡಿಸುತ್ತದೆ. **'ಕಲ್ಪನಾ' 'ಮಿಂಚು'** ಎಂಬ ಕತೆಗಳು, ವ್ಯಕ್ತಿಯ ವಿವೇಕ ವಿಚಾರದಿಂದ ಇಂತಹ ರುದ್ರ ಸಮಸ್ಯೆಗಳು ಬಿಡುವ ಸಂಭವವಿದೆಯೆಂದನ್ನು ಸೂಚಿಸುತ್ತವೆ. **'ಸ್ನೇಹಲತಾ'** ಎಂಬುದು ಹೆಣ್ಣು-ಗಂಡಿನ ಸಂಬಂಧದ ಸಮಸ್ಯೆಯ ಚಿತ್ರಣವಾದರೂ, ಸಾಮಾನ್ಯ ಮನುಷ್ಯರ ಕಾಮಾಕರ್ಷಣೆಯ ಸಹಜ ಸ್ವಭಾವವನ್ನು ತೋರಿಸುತ್ತದೆ. **'ಕೊಳಲು ಉಳಿದಿದೆ'** ಎಂಬ ಕತೆಯು ಭಾವನಾಪ್ರಧಾನ ಹೆಣ್ಣಿನ ಹೃದಯವನ್ನು ಚಿತ್ರಿಸಿದ್ದರೆ **'ಆ ರಾತ್ರಿ'** ಎಂಬುದು ಹೆಣ್ಣಿನ ಭೀರು ಸ್ವಭಾವವನ್ನೂ ಸೇಡಿನ ಹುಚ್ಚನ್ನೂ ರೇಖಿಸಿರುವುದು.

ಮಿಕ್ಕ ಕತೆಗಳೆರಡು **'ಲೋಕೋಪಕಾರ' "ಅನುಗೋಲು".** ಲೋಕೋಪಕಾರ ಒಳ್ಳೆಯದಾವುದನ್ನೂ ಸಂಶಯ-ಭೀತಿಗಳಿಂದ ಕಾಣುವ ಸಮಾಜದ ಜನರ ಸಹಜ ಚಿತ್ರವಾಗಿದೆ. 'ಅನುಗೋಲು' ಎಂಬುದರಲ್ಲಿ ಅತೃಪ್ತ ಮಾನವನು ತೃಪ್ತಿಗಾಗಿ ತಳೆದ ಉದಾತ್ತ ಜೀವನ ಮಾರ್ಗದ ದರ್ಶನವಿದೆ. ಕಥಾವಸ್ತುಗಳ ಆಯ್ಕೆಯಲ್ಲಿ ವೈವಿಧ್ಯವಿದೆ, ಔಚಿತ್ಯವಿದೆ.

ಕತೆಗಳನ್ನು ಹೊಸ ಹೊಸ ತಂತ್ರ-ಶೈಲಿಗಳಿಂದ ಹೇಳಬೇಕೆಂಬುದು ಇಂದಿನ ಲೇಖಕರದೊಂದು ಸಮಯವಾಗಿದೆ. ಸ್ವೀಕರಿಸಿದ ತಂತ್ರದಲ್ಲಿ ಕಥಾವಸ್ತುವನ್ನು ಉಚಿತ ರೀತಿಯಿಂದ ಕೂಡಿಸಿ ಬೆಳೆಯಿಸಿ, ಆಭಾಸವಾಗದಂತೆ ಮುಗಿಸುವುದಕ್ಕೆ ತುಂಬ ಅನುಭವಬೇಕು; ಬುದ್ಧಿಯ ಹದನು ಬೇಕು. ಇವಿಲ್ಲದೆ ಹೋದರೆ, ಚಮತ್ಕೃತಿಗಾಗಿ ಬಳಸಿದ ತಂತ್ರವು ವಿಕೃತಿಯಾಗಿ ಪರಿಣಮಿಸಿ, ಕೃತಿಯ ಸೌಂದರ್ಯವನ್ನು ಕಡಿಮೆಮಾಡುವುದು. ಈ ಸಂಕಲನದಲ್ಲಿಯ ಒಂದೊಂದು ಕತೆಗೂ ಶ್ರೀ ವರದರಾಜರು ಒಂದೊಂದು ಬಗೆಯ ತಂತ್ರವನ್ನು ಬಳಸಿದ್ದು, ತಂತ್ರದ ಪರಿಣಾಮ ಸಿದ್ಧಿಗಾಗಿ ಸಾಕಷ್ಟು ಎಚ್ಚರಿಕೆ ವಹಿಸಿದ್ದಾರೆ. ಇಲ್ಲಿ ನನ್ನ ವೈಯಕ್ತಿಕ ಅಭಿಪ್ರಾಯವೊಂದನ್ನು ಸೂಚಿಸಬೇಕೆನ್ನಿಸುತ್ತಿದೆ. ಯಾರೇ ಆಗಲಿ, ತಂತ್ರದ ತೊಡಕಿನಲ್ಲಿ ಸಿಕ್ಕು, ಕತೆಯ ಸ್ವಾರಸ್ಯವನ್ನು ಕಡಿಮೆ ಮಾಡಬಾರದು. ಕತೆಗಾಗಿ ತಂತ್ರವಿರಬೇಕೆ ಹೊರತು ತಂತ್ರಕ್ಕಾಗಿ ಕತೆಯಿರಕೂಡದು. ಶ್ರೀ ವರದರಾಜರಿಗೆ ಕಥೆ-ತಂತ್ರ

ಇವುಗಳ ಸಂಬಂಧ ಸಮನ್ವಯಗಳ ಕಲ್ಪನೆ ಚೆನ್ನಾಗಿ ಇದೆಯೆಂದು ನನ್ನ ಭಾವನೆ.

ಕತೆಗಳಿಗೆ ತಕ್ಕುದಾಗಿ ಭಾಷೆಯ ನಡೆಯಿದೆ. ಸೂಚನಾತ್ಮಕ ಸಂದರ್ಭಗಳಲ್ಲಿ ಅನೇಕ ಕಡೆಗೆ ಇನ್ನಿಷ್ಟು ಸ್ಪಷ್ಟತೆಯನ್ನು ಬಯಸಬಹುದು. ಸಾಮಾನ್ಯ ವಾಚಕರು. ಒಬ್ಬೊಬ್ಬರ ಬರವಣಿಗೆಯ ರೀತಿ ಒಂದೊಂದು ಬಗೆ. ಕೆಲವು ಲೇಖಕರು ವಾಚಕರ ಜಿಜ್ಞಾಸು ಬುದ್ಧಿಗೆ ಕೆಲಸ ಕೊಡಬೇಕೆನ್ನುವರು. ಕೆಲವರು ವಾಚಕರಿಗೆ ಏನೂ ಶ್ರಮವಾಗದಂತೆ ಎಲ್ಲವನ್ನೂ ಸ್ಪಷ್ಟವಾಗಿ ಹೇಳುತ್ತ ಹೋಗುವರು. ಶ್ರೀ ವರದರಾಜರ ಕತೆಗಳು ಮೊದಲನೆಯ ಲೇಖನ ಜಾತಿಗೆ ಸೇರಿದವುಗಳಾಗಿವೆ.

ಕೊನೆಯಲ್ಲಿ ಹಿರಿಯತನದ ಸಾಂಪ್ರದಾಯಿಕ ಹಾರಯಿಕೆ: ಶ್ರೀ ವರದರಾಜರಿಂದ ಇನ್ನೂ ಜನಸಾಹಿತ್ಯದ ರಾಶಿ ನಿರ್ಮಾಣವಾಗಲಿ, ರಸಿಕ ವಾಚಕರ ಸಾಹಿತ್ಯ ಕ್ಷುದೆಯನ್ನು ತಣಿಸಲಿ.

**ಜಯಂತಿ ಕಾರ್ಯಾಲಯ**<br>**ಧಾರವಾಡ**<br>೨೨—೧೧—೫೩

**ಬೆಟಗೇರಿ ಕೃಷ್ಣಶರ್ಮ**

# ಬಾಗಿಲು ತೆರೆದಿತ್ತು



ಆ ಮನೆಯ ಮುಂದಿನ ಬಾಗಿಲು ಯಾವಾಗಲೂ ಇಕ್ಕಿರುವುದು! ನನ್ನ ಓದುವ ಕೋಣೆಯ ಕಿಡಿಕೆಯೊಳಗಿಂದ ಆ ಮನೆಯ ಬಾಗಿಲು ಕಾಣು ವುದು. ನಾನು ಕಿಡಿಕೆಯೊಳಗಿಂದ ಎಷ್ಟೋ ಸಲ ಅತ್ತ ಕಡೆ ನೋಡುತ್ತಿರು ತ್ತೇನೆ. ನನ್ನ ಲಕ್ಷ್ಯ ಎಷ್ಟೋ ಸಲ ಆ ಕಡೆಗೇ ಇರುತ್ತದೆ. ಆದರೆ ಆ ಮನೆಯ ಬಾಗಿಲು ತೆರೆಯುವುದು ಬಹುಶಃ ನಾನು ಕಂಡಿಯೇ ಇಲ್ಲ!

ಅದು ಮನೆ! ಅಹುದು, ಮನೆಯೆಂದು ನಾವು ಕರೆಯಬೇಕು, ಅಷ್ಟೆ. ಮನೆಯ ಛಪ್ಪರ ಹಳೆಯ ತಗಡುಗಳದು! ಗೋಡೆ ತಟ್ಟೆಯದು! ಬಾಗಿಲು ಬೀಳಾದದ್ದು! ಹಿಂದಕ್ಕೆ ಇದೇ ಮನೆಯಲ್ಲಿ "ದನಗಳು" ಇರುತ್ತಿದ್ದವಂತೆ! ಈಗ "ಜನಗಳು" ಇವೆ! ಅಹುದು ಇರಲೇ ಬೇಕಲ್ಲ. ಮನೆಗಳು ಬಾಡಿಗೆಗೆ ಸಿಗದ ಕಾಲದಲ್ಲಿ, ಎಲ್ಲಿಯಾದರೂ ವಾಸವಾಗಿರಬೇಕಲ್ಲ!

ಇಂಥ ಮನೆಯಲ್ಲಿ ಯಾರು ವಾಸವಾಗಿರಲು ಬಂದಿರುವರೋ ನನ ಗೇನೂ ತಿಳಿಯದು. ಅವರು ಹೊರಗೆ ಬಂದುದನ್ನು ನೋಡಿಲ್ಲ. ಹೊರಗಿನ ಜನರ ಸಂಗಡ ಸಹವಾಸ ಬೆಳೆಸಿದುವನ್ನು ಕಂಡಿಲ್ಲ. ಒಳಗೆ ಯಾರೂ ಇಲ್ಲ ದವರಂತೆ ಮನೆ ಇದೆ. ಆದರೂ ಯಾರೋ ಅಲ್ಲಿ ಇರುವರೆಂಬ ಸುದ್ದಿ ಮಾತ್ರ ನಿಜ.

ನಾನೇನೊ ಅಲ್ಲಿ ಘೋಷಾ ಸ್ತ್ರೀಯರು ಬಂದಿರಬಹುದೇನೋ ಎಂದು ಹಲವು ಸಲ ಯೋಚಿಸಿದೆ. ಆದರೆ ಗಂಡಸರೂ ಘೋಷಾದಲ್ಲಿ ಇರುವದಿಲ್ಲ ವಷ್ಟೇ?........ಮತ್ತೆ ಯಾರಾದರೂ ಕೆಲಸ ಮಾಡುವವರಾಗಲಿ, ವಿದ್ಯಾರ್ಥಿ ಗಳಾಗಲಿ ಇರಬಹುದೇನೋ ಎಂದೆನಿಸಿತು. ಆದರೆ ರಾತ್ರಿಯಲ್ಲಿಯಾದರೂ

ಅವರ ಮಾತುಕತೆ ಕೇಳಬೇಡವೇ? ಇಷ್ಟು ಮೌನವಾಗಿ ಇರುವವರು ತಪಸ್ವಿಗಳು, ಆದರೆ ಅವರು ತಪೋವನವನ್ನು ಬಿಟ್ಟು ಇಲ್ಲಿಗೆ ಹೇಗೆ ಬರುವರು!........ಹೀಗೆ ಏನೇನೊ ಕಿಡಿಕೆ ಹತ್ತಿರ ಕುಳಿತು ಬಾಗಿಲದ ಕಡೆಗೆ ನೋಡುವ ನನಗೆ ವಿಚಾರಗಳು ಬರುತ್ತವೆ.

ಒಂದುದಿನ ನನ್ನಾಕೆ ಆ ಮನೆಯಲ್ಲಿ ಯಾರೋ ಒಬ್ಬ ಹೆಂಗಸು ಇರುವಳೆಂಬ ಸುದ್ದಿಯನ್ನು ತಿಳಿದುಕೊಂಡಳು. ಇದರಿಂದ ನನ್ನ ಕುತೂಹಲವು ಮತ್ತಿಷ್ಟು ಕೆರಳಿತು. ಒಬ್ಬಳೇ ಒಬ್ಬಳು ಹಗಲು ರಾತ್ರಿ ಅಲ್ಲಿ ಇರಬೇಕಾದರೆ!! ಆದರೆ ಇದರ ಬಗ್ಗೆ ಹೆಚ್ಚಿಗೆ ವಿಚಾರ ವಿನಿಮಯ ಮಾಡುವ ಹಾಗಿರಲಿಲ್ಲ. ನನ್ನಾಕೆಯು ಸಂಗಡ ಇದರ ಬಗ್ಗೆ ಕೇಳದ ಹಾಗಾಯಿತು. ಹೆಂಗಸರ ಬಗ್ಗೆ ಕೇಳಿದರೆ ಅವಳಾದರೂ ಏನು ತಿಳಿದುಕೊಂಡಾಳು! ಅಂತೆಯೆ ನಾನು ಮೌನವನ್ನು ತಾಳಬೇಕಾಯಿತು.

ನನ್ನ ಕೋಣೆಯಲ್ಲಿ ಕುಳಿತಾಗ, ಅತ್ತ ಕಡೆಗೆ ನನ್ನ ಲಕ್ಷ್ಯ ಹೋಗಹತ್ತಿ ನನ್ನ ಓದುವಿಕೆಗೂ ತೊಂದರೆಯಾಗತೊಡಗಿತು. ಕಣ್ಣುಗಳ ಎದುರಿಗೆ ಪುಸ್ತಕವಿರಬೇಕು; ಚಿತ್ತವೆಲ್ಲ ಬಾಗಿಲದ ಕಡೆಗೆ ಇರಬೇಕು! ಕಿಡಿಕಿಯ ಬಾಗಿಲ ಮುಚ್ಚಿದರೂ ಹಾಗೆಯೇ ಆಗ ತೊಡಗಿತು. ಇನ್ನು ನಾನೇ ಎಲ್ಲಿ ಆ ಮನೆ ಬಿಡಬೇಕಾಗುವದೋ ಎಂದೊಮ್ಮೆ ಎನ್ನಿಸಿತು.

ಇದ್ದಕ್ಕಿಂದ್ದತೆ ಆ ಬಾಗಿಲದ ಎದುರಿಗೆ ಗದ್ದಲ ಕಾಣಿಸಿತು!!

ಒಬ್ಬ ಡಾಕ್ಟರನು ಒಳಗೆ ಹೋದನು. ಅವನ ಹಿಂದೆ ಅವನ ಕಂಪೌಂಡರ ಮತ್ತು ನರ್ಸ ಹೋದರು. ಜೊತೆಗೆ ಸುಮಾರು ಮೂವತ್ತು ವರ್ಷದ ಒಬ್ಬ ಮನುಷ್ಯನು ಬಾಗಿಲು ಮುಂದೆ ಮಾಡಿಕೊಂಡು ಒಳಗೆ ಮಾಯವಾದನು.

ನಾನು ಆ ಕಡೆಗೆ ನೋಡುತ್ತಿದ್ದೆ!

ಹದಿನೈದು ನಿಮಿಷ ಒಳಗೆ ಏನೇನೋ ಗದ್ದಲ ಸಾಗಿತ್ತು ಒಳಗೆ ನಡೆಯುವ ಮಾತುಕತೆಗಳು ಸ್ಪಷ್ಟವಾಗಿ ಏನೂ ಕೇಳುತ್ತಿರಲಿಲ್ಲ. ಆದರೆ ಯಾರಿಗೊ ಬಹಳ ಜಡ್ಡಾಗಿರಬೇಕು! ಎನೋ ಗಂಭೀರ ಸ್ವರೂಪದ್ದಿರಬೇಕು! ಎಂದು ಮಾತ್ರ ಅನಿಸುವಂತಿತ್ತು.

ಡಾಕ್ಟರನು ಹೊರಗೆ ಬಂದನು. ಅವನು ಹಸನ್ಮುಖಿಯಾಗಿಯೇ ಇದ್ದನು. ಅವನ ಹಿಂದೆ ನರ್ಸ ಮತ್ತು ಕಂಪೌಂಡರರು ಓಡಿಬಂದರು. ಆದರೆ ಆ ಮೂವತ್ತು ವರುಷದ ಮನುಷ್ಯನ ಮುಖದಲ್ಲಿ ಮಾತ್ರ ಚಿಂತೆ ಒಟ್ಟು ಗೂಡಿತ್ತು. ಕಂಗೆಟ್ಟವನಂತೆ ಹುಚ್ಚುಕಳೆ ಮುಖದ ಮೇಲೆ ಸುರಿಯುತ್ತಿತ್ತು.

ಆ ಕಡೆಗೆ ದಾಥಿಯ ಒಂದು ಬದಿಗೆ "ಕಾರು" ನಿಂತುಕೊಂಡಿತ್ತು. ಡಾಕ್ಟರ ಅದರೊಳಗೆ ಸೇರಿ ಕಾರು ಹೊಡೆಯುವ ತಯಾರಿ ನಡೆಸಿದ. ನರ್ಸ ಮತ್ತು ಕಂಪೌಂಡರ ತಮ್ಮ ಹಿಂದಿನ ಸ್ಥಳಗಳಲ್ಲಿ ಕುಳಿತುಕೊಂಡರು.

ಆ ಮನುಷ್ಯನು ಬಾಗಿ ಅತ್ಯಂತ ದೀನ ಸ್ವರದಿಂದ ಡಾಕ್ಟರಿಗೆ ಕೇಳಿದ "ಏನ್ರಿ ಡಾಕ್ಟರ? ಹೇಗೆ ಮಾಡಬೇಕು?"

ನಾನೇನು ಹೇಳುವುದು? ಕೇಸ ಸೀರಿಯಸ್ ಇದೆ. ಒಂದೊಂದು ಇಂಜಕ್ಷನ್ನಿಗೆ ಸುಮಾರು ಐವತ್ತು ರೂಪಾಯಿ ಬೀಳಬಹುದು. ಆಪರೇಶನ್ ಮಾಡಬೇಕಾಗುತ್ತದೋ ಏನೋ!....

"ನೋಡ್ರಿ ಡಾಕ್ಟರ! ಹೇಗಾದರೂ ಮಾಡಿ ಬಿಡಬೇಕು. ಇದೊಂದು ಪುಣ್ಯದ ಕೆಲಸ!"

"ಓ! ಪುಣ್ಯದ ಕೆಲಸ! ಹೀಗೆ ಎಲ್ಲರೂ ಅಂದರೆ ನಾನು ಈ ಧಂದೆ ಯನ್ನಾದರೂ ಏಕೆ ಮಾಡಬೇಕು?"

ನೋಡ್ರಿ ಡಾಕ್ಟರ ........ ಏನೋ ಬಡವ ........"

"ಛೀ, ನನ್ನಿಂದ ಈ ಕೆಲಸವು ಆಗದು. ಊರಲ್ಲಿ ವೈದ್ಯರಿದ್ದಾರೆ. ಅವರು ಸಹಾಯಮಾಡಬಹುದು. ಅವರಿಗೆ ಎರಡು ರೂಪಾಯಿ ಕೊಟ್ಟರೆ ಸಾಕು."

"ಜೀವದ ಪ್ರಶ್ನೆ. ಅದಕ್ಕಾಗಿಯೇ ಇಲ್ಲಿ ಪಟ್ಟಣಕ್ಕೆ ಬಂದಿದ್ದೇವೆ ಡಾಕ್ಟರ. ನಿಮ್ಮ ಹೆಸರು ಕೇಳಿ ಬಂದಿದ್ದೇವೆ ...... ನಾನು ಹಣ ಕೊಡು ತ್ತೇನೆ ........ ಕಂತುಮಾಡಿ ಕೊಡುತ್ತೇನೆ ...... ಕೊಡುತ್ತೇನೆ, ಡಾಕ್ಟರ ವಿಶ್ವಾಸವಿಡಿರಿ."

"ಈಗ ಎಷ್ಟು ಕೊಡುವಿರಿ?"

“ ಹದಿನೈದು ಕೊಡುತ್ತೇನೆ, ಕೆಲಸ ಆರಂಭಿಸಿ.”

“ ಹದಿನೈದು ! ! ನೂರು ರೂಪಾಯಿ ಖರ್ಚು ಬರುವಾಗ ಹದಿನೈದ ರಿಂದ ಏನಾಗಬೇಕು ? ”

“ಆಯಿತು. ಇಪ್ಪತ್ತು ಕೊಡುತ್ತೇನೆ. ನಿಮ್ಮ ದವಾಖಾನೆಗೆ ಬಂದು ಕೊಟ್ಟು ಹೋಗುತ್ತೇನೆ.”

“ ಹೊಂ, ಆಗಲಿ. ಟಿಪ್ಪಣಿ ಮಾಡಿಕೊಳ್ಳಿರಿ.”

“ ಹೆಸರು ? ” ನೋಟುಬುಕ್ಕು ತೆಗೆಯುತ್ತ ಕಂಪೌಂಡರ ಕೇಳಿದ.

“ ಚಂದ್ರಕಾಂತ ........ ”

“ ಅಡ್ಡ ಹೆಸರು ಮತ್ತು ವಯಸ್ಸು ? ”

“ ಕಲ್ಲೂರ— ವಯಸ್ಸು, ಮೂವತ್ತು.”

“ ಅಲ್ಲಾ ಮರೆತೆ. ನಿಮ್ಮ ಮನೆಯವರ ಹೆಸರು? ”

ಚಂದ್ರಕಾಂತ ಹಿಂದು ಮುಂದು ನೋಡಿದನು. ನರ್ಸ ಹೇಳಿದಳು. “ಶಾಂತಾ ಎಂದು ಏನೋ ಅಂದಂತಾಯಿತು.”

ಚಂದ್ರಕಾಂತ “ ಹೌದು ...... ಅದೇ ” ಎಂದು ನುಡಿದ.

ಕಾರು ಸಪ್ಪಳಮಾಡಿತು. ಚಂದ್ರಕಾಂತ ಹಿಂದೆ ಸರಿದು ಬಂದ. ಚಂದ್ರಕಾಂತ ತಿರುಗಿ ಬರುವಾಗ ಕಾಲಲ್ಲಿ ಶಕ್ತಿಯೆ ಇರಲಿಲ್ಲ. ಅವನು ಬಾಗಿಲು ತೆರೆದು ಒಳಗೆ ಹೋಗಬೇಕೆನ್ನುವಾಗ, ಎದುರಿಗೆ ನನ್ನ ಕಿಡಿಕೆಯ ಕಡೆಗೆ ನೋಡಿದನು. ಅವನು ಹೊರಳಿದುದನ್ನು ಕಂಡ ಕೂಡಲೆ ನನ್ನ ಮುಖ ಕೆಳಗೆ ಮಾಡಿದೆ.

ಆ ಬಾಗಿಲು ಮತ್ತೆ ಇಕ್ಕಿಕೊಂಡಿತು. !

ಮುಚ್ಚಿದ ಬಾಗಿಲು ಮುಚ್ಚಿಯೆ ಇದೆ; ಬಾಗಿಲದೊಳಗೆ ಏನು ನಡೆದಿದೆಯೊ ಏನೂ ತಿಳಿಯುವಂತಿರಲಿಲ್ಲ. ಆ ಜನರಿಗೆ ಏನಾದರೂ ತೊಂದರೆ ಇರಬೇಕು. ಚಿಂತೆಯಿರಬೇಕು ಎಂದು ಊಹಿಸಿದೆ. ಆದರೆ ಆ ಬಾಗಿಲದ ವರೆಗೆ ಹೋಗಿ ನಾನಾಗಿಯೆ ಮಾತನಾಡಿಸುವ ಧೈರ್ಯ ನನಗಾಗಲಿಲ್ಲ.

........ ಒಂದು ತಿಂಗಳ ನಂತರ !

ಅವು ಚಂದ್ರೋದಯದ ದಿನಗಳು! ಅದೇಕೋ ಮೋಡಗಳಿಲ್ಲ ಮಾಯ ವಾಗಿ ಬಾನು ತಿಳಿಯಾಗಿತ್ತು. ತಂಗದಿರ ಮುಗುಳ್ನಗೆಯಿಂದ ಮೂಡಣದಲ್ಲಿ ನಿಂತುಕೊಂಡು ಭೂಮಿಯ ಕಡೆಗೆ ನೋಡುತ್ತಿದ್ದ. ಅವನ ಸ್ಪರ್ಶಮಾತ್ರ ದಿಂದಲೆ ಇಳೆಯು ಹರ್ಷಪುಲಕಿತವಾಗಿತ್ತು. ಮಳೆಗಾಲದ ದಿನಗಳಲ್ಲಿ ಇಂಥ ಬೆಳುದಿಂಗಳ ಇರುಳುಗಳು ಇರುವುದು ತೀರ ಕಡಿಮೆ.

ಬೆಳುದಿಂಗಳ ಅಪರೂಪ ಅಮೃತವನ್ನು ಸವಿಯುತ್ತ ನಾನು ಕಿಡಿಕೆಯ ಬಳಿ ಕುಳಿತಿದ್ದೆ. ಗೋಪುರದಲ್ಲಿಯ ದೊಡ್ಡ ಗಡಿಯಾರವು ಢಣ ಢಣ ಎಂದು ಹತ್ತುಗಂಟೆ ಬಾರಿಸಿತು. ಸನಿಹದ ಒಂದು ಮನೆಯಲ್ಲಿ ಬಾನುಲಿ ಹಚ್ಚಿದ್ದರು. ತರತರದ ಗಾನಗಳ ಇನಿದನಿ ಇಂಪಾಗಿ ಕೇಳಬರುತ್ತಿತ್ತು. ಈ ಧ್ವನಿಯ ಜೊತೆಗೆ ಕಪ್ಪೆಗಳ ಸ್ಪರ್ಧೆ ಇದ್ದಿತೋ ಏನೋ! ಅವು ಪೊರ್ರ್ ಪೊರ್ರ್ ಎಂದು ಜೋರಾಗಿಯೆ ಒದರುತ್ತಿದ್ದವು.

ಒಗೆ ಬೆಳದಿಂಗಳ ಚೆಲ್ವರಾಣಿ ನನ್ನ ಮನದಲ್ಲಿ ಆಟವಾಡುತ್ತಿರುವಾಗ ಒಮ್ಮೆಲೆ ಬಾಗಿಲು ತೆರೆದ ಸಪ್ಪಳವಾಯಿತು. ಅಹುದು, ಅದು ಅದೇ ಮನೆಯ ಬಾಗಿಲು! ಒಂದು ವ್ಯಕ್ತಿ ಆ ಬಾಗಿಲದೊಳಗಿಂದ ಹೊರಗೆ ಬಂದಿತು. ಸೀರೆಯ ಬಣ್ಣ ಎದ್ದು ಕಾಣುತ್ತಿದ್ದುದರಿಂದ ಅವಳು ಹೆಂಗಸು ಎಂಬುವುದು ಕೂಡಲೆ ಗೊತ್ತಾಯಿತು. ಅವಳು ಚಂದ್ರಕಾಂತನ ಹೆಂಡತಿ ಶಾಂತಾ ಇರಲೇ ಬೇಕೆಂದೂ ಅನಿಸಿತು. ಆ ಮನೆಗೆ ಬಂದು ಇಷ್ಟುದಿನಗಳಾಗಿದ್ದರೂ, ಅವಳು ಹೊರಗೆ ಬಂದಿರುವುದನ್ನು ನಾನು ನೋಡಿಯೆ ಇರಲಿಲ್ಲ.

ಕೂಡಲೆ ನಾನು ನನ್ನ ಕೋಣೆಯೊಳಗಿನ ದೀಪವನ್ನು ಆರಿಸಿದೆ. ಇದ ರಿಂದ ನನ್ನ ಮುಖ ಹೊರಗೆ ಕಾಣಬಾರದೆಂಬುದೇ ನನ್ನ ಉದ್ದೇಶವಿತ್ತು. ಬಹಳ ದಿನಗಳಿಂದ ನನ್ನ ಕುತೂಹಲವನ್ನು ಕೆರಳಿಸಿದ ಆವಳನ್ನು ನೋಡುತ್ತ ಕುಳಿತೆ.

ಬೆಳದಿಂಗಳು ಬಾಗಿಲದ ವರೆಗೂ ಪಸರಿಸಿತ್ತು. ಆದುದರಿಂದ ಬಾಗಿ ಲದ ಹೊರಗೆ ನಿಂತ ಆವಳನ್ನು ನೋಡುವುದು ಶಕ್ಯವಿತ್ತು.

ಆವಳು ಚಂದ್ರನ ಕಡೆಗೆ ಮೊಗವೆತ್ತಿ ಆವನನ್ನೆ ನೋಡುತ್ತ ಹಲವು ನಿಮಿಷ ನಿಂತಳು. ಬೆಳದಿಂಗಳಲ್ಲಿ ನಳನಳಿಸುವ ಬಳ್ಳಿ ಆವಳಾಗಿದ್ದಳು.

ಅವಳು ತೆಳುವಾಗಿದ್ದಳು. ಅದೇ ಆಗ ಹಾಸಿಗೆಯಿಂದ ಎದ್ದು ಬಂದವರಂತೆ ಅವಳ ಬಟ್ಟೆಗಳ ಉಡುವಿಕೆ ಇದ್ದಿತು. ಕೂದಲುಗಳೂ ಹರವಿದ್ದವು. ಪಾಪ! ಅವಳಿಗೆ ಯಾರೂ ಆರೈಕೆ ಮಾಡಲಿಲ್ಲವೋ ಏನೋ!

ಪ್ರಶಾಂತವಾದ, ಕಾಂತಿಯುತವಾದ, ಉಲ್ಹಾಸದಾಯಕವಾದ ಬೆಳು ದಿಂಗಳನ್ನು ನೋಡಿ ಅವಳಿಗೆ ಏನನಿಸಿತೋ! ಚಂದ್ರನ ಕಿರಣಗಳನ್ನು ನುಂಗಿಬಿಡಬೇಕು ಅನ್ನುವವರಂತೆ ಒಂದು ಚಣ ಆವನ ಕಡೆ ನೋಡಿದಳು. ಮರುಚಣದಲ್ಲಿಯೆ ನಿಟ್ಟುಸಿರು ಬಿಟ್ಟಳು. ತಲೆಯನ್ನು ತನ್ನ ಎರಡೂ ಕೈಗಳಿಂದ ಒತ್ತಿಕೊಂಡಳು.

ಒಳಗೆ ಯಾವುದೋ ಧ್ವನಿ ಕೇಳಿಸಿತು. ಅದು ಕೂಸಿನ ಧ್ವನಿ ಯಂತೆ ಇದ್ದಿತು. ಅವಳು ಬಾಗಿಲವಿಕ್ಕಿ ಒಳಗೆ ಹೋಗಬೇಕೆಂದಳು. ಆದರೆ ಅಷ್ಟರಲ್ಲಿ .... .... ??

ಅಗೋ ಚಂದ್ರಕಾಂತ! ಯಾವಾಗಲೂ ಉಡುವ ಖಾದಿ ಬಟ್ಟೆಗಳನ್ನೇ ಧರಿಸಿದ್ದಾನೆ. ಕೈಯಲ್ಲಿ ಒಂದು ಕೈಚೀಲ. ಕುಲಕುಲನೆ ನಗುತ್ತ ಅಲ್ಲಿಗೆ ಬಂದನು. ಶಾಂತಾ ಅವನನ್ನು ನೋಡಿ ಮುಗುಳ್ನಗೆ ಸೂಸಿದಳು.

ಅವನನ್ನು ನೋಡಿದ ಕೂಡಲೆ ಅವಳು ಕೇಳಿದಳು. "ಏನು? ಏನು ಮಾಡಿದಿರಿ? ಔಷಧ ತಂದಿರಾ? ರೂಪಾಯಿ ತಂದಿರಾ?"

ಚಂದ್ರಕಾಂತ ಇವೆಲ್ಲ ಪ್ರಶ್ನೆಗಳಿಗೆ ಉತ್ತರಕೊಡಲಿಲ್ಲ. "ನೋಡು ಇವೊತ್ತು ನಿನಗೆ ಬೇಕಾದ ಮುಖ್ಯ ವಸ್ತುವನ್ನು ತಂದಿದ್ದೇನೆ. ಬಹಳ ಮಹತ್ವದ ವಸ್ತು."

ಅವಳು ಆಶ್ಚರ್ಯದಿಂದ ಕೇಳಿದಳು. "ಏನು? ಏನದು? ನೋಡೋಣ".

ಚಂದ್ರಕಾಂತ ಒಂದು ಪದಾರ್ಥವನ್ನು ತೆರೆದು ಅದನ್ನು ಅವಳ ಕೈಯಲ್ಲಿಡುತ್ತ ಹೇಳಿದ, "ಸಂಪಿಗೆಯ ಹೂವಿನ ಮಾಲೆ. ನಮ್ಮ ಜೀವನ ಹೂವಿನ ಹಾಗೆ ಇರಬೇಕೆಂದು ಅನಿಸುತ್ತದೆ ನನಗೆ."

"ಛೀ, ಏನು ಹುಚ್ಚುತನ! ಈಗ ಆ ಹಿಂದಿನ ಬೆಳುದಿಂಗಳ ದಿನಗಳು ಇಲ್ಲ. ಮನೆಯಲ್ಲಿಯ ಗೋಳು ಏನು ಹೇಳಲಿ? ಬಾಡಿಗೆಯನ್ನು ಐದಾರು

ಸಲ ಕೇಳಿ ಹೋದರು. ಹಾಲು, ಮಸರಿನವರು ನನಗೆ ಗಂಟು ಬಿದ್ದಿದ್ದಾರೆ. ನೀವೇನು ಮನೆಯಲ್ಲಿ ಇರುವದೇ ಇಲ್ಲ. ಎಲ್ಲಾ ಗೋಳು ನನ್ನ ಸುತ್ತ. ಈಗ ಈ ಹೂವನ್ನು ತೆಗೆದುಕೊಂಡು ಏನು ಮಾಡಲಿ? ”

ಅವಳು ಒಂದೇಸವನೆ ಹೀಗೆ ಆಡಿದುದನ್ನು ಹೇಳಿ ಅವನು ತೆಪ್ಪಗಾದ!

ಅವಳು ಹೇಳಿದಳು “ ನಾನು ಎಲ್ಲವನ್ನೂ ಸಹನೆ ಮಾಡಬಹುದು, ನೀವಾದರೂ ಯಾವಾಗಲೂ ಮನೆಯಲ್ಲಿದ್ದರೆ ? ”

ಇಬ್ಬರೂ ಕೆಳಮೊಗಮಾಡಿದರು, ಮೌನವಾದರು !

ಒಳಗಿನ ಧ್ವನಿ ಮತ್ತೆ ಕೇಳಿಸಿತು. ಅವರು ಒಳಗೆ ಹೋದರು. ಬಾಗಿಲು ಇಕ್ಕಿತು !

ಮರುದಿನ ಬೆಳಗು. ಆಗ ನಾನು ಚಹ ತೆಗೆದುಕೊಳ್ಳುವ ಹೊತ್ತಾಗಿತ್ತು. ಒಳಗೆ ಸ್ಟೋವಿನ ಸಪ್ಪಳವಿತ್ತು. ಕಪ್ಪುಬಸಿಗಳ ಸಪ್ಪಳವೂ ಆಯಿತು. ಇನ್ನು ಚಹ ಬೇಗ ಬರಹುದೆಂದು ದಾರಿಕಾಯುತ್ತ ನನ್ನ ಕೋಣೆಯಲ್ಲಿಯೆ ಕುಳಿತಿದ್ದೆ.

ಬಾಗಿಲದಲ್ಲಿ ಏನೋ ಸದ್ದಾಯಿತು. ಚಹವೇ ಬಂದಿತೆಂದು ನಾನು ಮುಖವನ್ನು ಎತ್ತಿದೆ. ಆದರೆ ಅಲ್ಲಿ ಯಾರು ? ಚಂದ್ರಕಾಂತ ! ನನಗೆ ಅತ್ಯಂತ ಆಶ್ಚರ್ಯವಾಯಿತು. ಇಷ್ಟು ದಿನಗಳಾದರೂ ಒಂದು ಸಲವೂ ನನ್ನ ಕಡೆಗೆ ಬಂದಿರಲಿಲ್ಲ. ಅವನ ಆಗಮನವನ್ನು ಕಂಡು ಚಕಿತನಾದೆ.

ಚಂದ್ರಕಾಂತ ದೂರದಲ್ಲಿರುವಾಗ ಏಕವಚನದಿಂದ ಸಂಬೋಧಿಸಿಯೇ ನಾನು ವಿಚಾರಿಸುತ್ತಿದ್ದೆ. ಈಗ ಮನೆಗೆ ಬಂದಾಗ ಬಹುವಚನದಲ್ಲಿ ಸಂಬೋಧಿಸುವದನ್ನು ಆರಂಭಿಸಿದೆ. ‘ ಬನ್ನಿ ಬನ್ನಿ ’ ಎಂದೆ.

ಅವರು ಸಾವಧಾನವಾಗಿ ಬಂದು ಚಾಪೆಯ ಮೇಲೆ ಕುಳಿತರು. ಏನೋ ಒಮ್ಮೆಲೆ ಹೇಳಬೇಕೆಂದಿದ್ದರು. ಅವರಂತೆ ಅವರ ಮುಖಚರ್ಯೆ ಇದ್ದಿತು. ಆದರೆ ........ ? ಮತ್ತೆ ಬೇರೆ ಏನೋ ಮಾತು ತೆರೆಯುತ್ತಿದ್ದರು.

ಇಬ್ಬರೂ ಕೂಡಿ ಚಹ ಕುಡಿದೆವು. ರೇಶನ್, ಕಂಟ್ರೋಲ್ ಕಾಂಗ್ರೆಸ ರಾಜ್ಯ, ಸಂಸ್ಥಾನ ಇವೆಲ್ಲ ಮಾತುಗಳು ಹಲವು ನಿಮಿಷಗಳಲ್ಲಿಯೆ ಬಂದು ಹೋದವು. ಆದರೆ ಮನೆತನದ ಮಾತುಗಳು ವಿಶೇಷವಾಗಿ ಏನೂ ಬರಲಿಲ್ಲ.

ನಾನೇ ಕೇಳಿದೆ "ಏನೋ ನಿಮ್ಮ ಮನೆಯಲ್ಲಿ ತ್ರಾಸವಿರಬೇಕು?"

"ನಮ್ಮ ತ್ರಾಸ ಹೇಳುವ ಹಾಗಿಲ್ಲ. ಅವಳು ಬದುಕಿದ್ದೇ ಹೆಚ್ಚಿನದು."

"ಏನಾಗಿತ್ತು?"

"ಗರ್ಭಿಣಿ ಇದ್ದಳು. ನೂರೆಂಟು ಬೇನೆ ......"

"ಏನು ಬೇನೆ?"

ಚಂದ್ರಕಾಂತ ಮುಖ ಕೆಳಗೆ ಮಾಡಿದರು. ಒಮ್ಮೆಲೆ ನಿಟ್ಟುಸುರು ಬಿಡುತ್ತ ಹೇಳಿದರು. "ಡಾಕ್ಟರರೇ ಬದುಕಿಸಿದರು."

"ಹೊತ್ತು ಚನ್ನಾಗಿತ್ತು ಹಾಗಾದರೆ?"

"ಹೂಂ ಆದದ್ದು ಆಗಿಹೋಯಿತು. ಆದರೆ ಈಗ ನೀವು ........?"

ನನ್ನಿಂದ ಏನೋ ಸಹಾಯಯಾಚನೆ ಇದೆಯೆಂಬುದು ಅವರ ಮಾತು ಗಳಿಂದ ಅನಿಸಿತು.

"ನಾನು ಏನು ಮಾಡಬೇಕಾಗಿದೆ?" ಎಂದು ಕೇಳಿದೆ.

"ನೀವೇನೋ ........ ಇದ್ದವರು ಎಂದು ಕೇಳಿದ್ದೇನೆ." ಈಗ ಚಂದ್ರ ಕಾಂತರು ತಮ್ಮ ಧ್ವನಿಯಲ್ಲಿ ಧೈರ್ಯವನ್ನು ತುಂಬಿಕೊಳ್ಳುತ್ತಿದ್ದರು.

ಅವರ ಮಾತಿನ ಅರ್ಥ ನನಗೆ ಸರಿಯಾಗಿ ಆಗಲಿಲ್ಲ. "ಏನು ಸಹಾಯ ಮಾಡಬೇಕೊ ಹೇಳಿ. ನನಗೆ ಶಕ್ಯವಿದ್ದಷ್ಟು ಮಾಡುವೆ" ಎಂದೆ.

"ನೂರು ರೂಪಾಯಿ ಸಹಾಯ ಆಗಬಹುದೆ?" ಚಂದ್ರಕಾಂತ ಮೆತ್ತ ಗಿನ ಧ್ವನಿಯಲ್ಲಿ ನುಡಿದರು.

ನಾನು ಸ್ವಲ್ಪ ಸುಮ್ಮನೇ ಕುಳಿತೆ. ನನ್ನ ಮೌನದ ಅರ್ಥವನ್ನು ಅವರು ಏನುಮಾಡಿಕೊಂಡರೋ ಏನೋ?

ಅವರು ಸುತ್ತು ಮುತ್ತು ನೋಡಿದರು. ಧೈರ್ಯದಿಂದ ತಮ್ಮ ಕಿಸೆ ಯೊಳಗಿನ ಒಂದು ಬಿಲವಾರವನ್ನು ತೆಗೆದು, "ನೋಡಿ, ಇದರ ತೂಕ ಒಂದು ತೊಲೆ ಆಗಬಹುದು. ನಿಮ್ಮ ಹತ್ತಿರ ಇದು ಇರಲಿ ನಾನು ಹಣ ನಿಮಗೆ ತಿರುಗಿ ಕೊಟ್ಟ ಮೇಲೆ ಕೊಟ್ಟೇರಂತೆ ಅಂದು" ಅಂದರು.

ಡಾಕ್ಟರನ ಎದುರಿಗೆ ಮಾತನಾಡುವಾಗ ಎಷ್ಟು ದೈನ್ಯದಿಂದ ಮಾತನಾಡುತ್ತಿದ್ದರೋ ಅಷ್ಟೇ ದೈನ್ಯದಿಂದ ನನ್ನೆದುರು ಮಾತನಾಡಿದರು. ನನಗೆ ಬಹಳ ಕನಿಕರವೆನಿಸಿತು. ಹಣವಿಲ್ಲದಿದ್ದರೆ ಮನುಷ್ಯ ಹೇಗೆ ತನ್ನ ಸ್ವಾಭಿಮಾನಕ್ಕೆ ಗೋರಿ ಕಟ್ಟುತ್ತಾನೆ ! ಮೃಚ್ಛಕಟಿಕ ನಾಟಕದಲ್ಲಿ ಹಣವಿಲ್ಲಂತೆ ಗೋಳಿಡುವ ಚಾರುದತ್ತನ ಪಾತ್ರವು ಒಂದು ಕ್ಷಣ ನನ್ನ ಕಣ್ಣಿದುರು ಹಾದು ಹೋಯಿತು.

ಎರಡನೆಯವರ ಪದಾರ್ಥಗಳನ್ನು ತೆಗೆದುಕೊಂಡು ಪತ್ರಿ ಇಟ್ಟುಕೊಂಡು ಹಣಕೊಡುವ ವ್ಯವಹಾರವನ್ನು ನಾನು ಎಂದಿಗೂ ಮಾಡಿದವನಲ್ಲ. ಚಂದ್ರಕಾಂತ ಬಿಲವಾರ ಹೊರಗೆ ತೆಗೆದಕೂಡಲೆ ನನಗೆ ಅತ್ಯಂತ ಕೆಡಕೆನಿಸಿತು. ನಾನು ಅವರಿಗೆ ಸ್ಪಷ್ಟವಾಗಿ ಹೇಳಿದೆ. "ನಿಮ್ಮ ಬಿಲವಾರ ಬೇಡ. ನಾನು ನಿಮಗೆ ಐವತ್ತು ರೂಪಾಯಿ ಕೊಡುತ್ತೇನೆ. ಮತ್ತೆ ನಿಮಗೆ ಅಡಚಣೆ ಎನಿಸಿದರೆ ಕೊಡುತ್ತೇನೆ. ಸದ್ಯ ನನ್ನ ಹತ್ತಿರ ಇಲ್ಲ."

ನನ್ನ ಮಾತುಗಳನ್ನು ಕೇಳಿ ಅವರಿಗೆ ಆನಂದವಾಗಿರಬೇಕು. ಅಂತೆಯೇ ಮುಖದಲ್ಲಿ ಒಮ್ಮೆಲೆ ಬದಲಾವಣೆ ಕಂಡಿತು. ಮೌನವಾಗಿಯೆ ಕೃತಜ್ಞತೆಯನ್ನು ಅರ್ಪಿಸುವಂತೆ ಅವರ ಮುಖವಾಗಿತ್ತು. ನಾನು ಕಪಾಟಿನಲ್ಲಿರುವ ರೂಪಾಯಿಗಳನ್ನು ತೆರೆದು ಅವರ ಕೈಯಲ್ಲಿ ಇಟ್ಟಾಗ, ಅವರು "ಮೇನಿ ಥ್ಯಾಂಕ್ಸ ನಿಮ್ಮಂಥ ಜನರು ಸಿಗುವದು ದುರ್ಲಭ" ಎಂದು ಉದ್ಗಾರ ತೆಗೆದರು.

ಬಾಗಿಲು ತೆಗೆಯಿತು ! ಮತ್ತೆ ಇಕ್ಕಿತು !

ಇಕ್ಕಿದ ಬಾಗಿಲು ಹಾಗಿಯೇ ಇದೆ. ಮೊದಲಿನಂತೆಯೇ ಇದೆ. ಅಲ್ಲಿ ಯಾವ ಸುಳಿವೂ ಇಲ್ಲ.

ಚಂದ್ರಕಾಂತ ನನ್ನ ಕಡೆಗೆ ಹಣದ ಸಲುವಾಗಿ ಹೇಗೆ ಬಂದರೊ, ಅವರ ಮನೆತನದ ಇತಿಹಾಸವೇನೊ, ಅವರ ಸ್ವಭಾವವೇನೊ, ಯಾವುದೂ ಅರಿಯದ ಸಂಗತಿ. ನನ್ನ ಕಡೆಗೆ ಅವರು ಬಂದುದು ಮೊದಲ ಸಲ. ಅಂತೆಯೆ

ಅವುಗಳ ಬಗ್ಗೆ ನಾನು ಕೇಳುವುದು ಸಾಧ್ಯವಿರಲಿಲ್ಲ. ಪುನಃ ಕಿಡಿಕೆಯ ಹತ್ತಿರ ಕುಳಿತು ಬಾಗಿಲ ಕಡೆಗೆ ನೋಡುವದೊಂದೆ ನನ್ನ ಕಾರ್ಯವಾಗಿತ್ತು.

ಹೀಗೆ ಹಲವು ದಿನ ಉರುಳಿದವು. ಒಂದು ದಿನ ಒಮ್ಮಿಂದೊಮ್ಮೆ ನಮ್ಮ ಮನೆಯಲ್ಲಿ ಅತಿಥಿದೇವರ ಪ್ರವೇಶವಾಯಿತು. ಬಹಳ ಪರಿಚಿತ ಶಬ್ದದಲ್ಲಿ ಹೇಳಬೇಕಾದರೆ ಅವರು "ಟೊಣ್ಣ್ಯಾ" ಆಗಿದ್ದರು ತಲೆಯ ಮೇಲೆ ರುಮಾಲವಿತ್ತು. ಕೈಯಲ್ಲಿ ಒಂದು ಹಳೆ ಚತ್ತರಿಗೆಯಿತ್ತು. ನಿರ್ಭಿಡೆಯಿಂದ ಅವರು ಒಳಗೆ ಬಂದು ಕುರ್ಚಿಯ ಮೇಲೆ ಕುಳಿತರು.

ಈ ಅತಿಥಿಗಳನ್ನು ಸತ್ಕರಿಸುವುದು ಒಂದು ಮೋಜೆನಿಸಿತು. ಒಮ್ಮೆ ಗಾಬರಿಯೂ ಆಯಿತು. ನಾನು ಅವರಿಗೆ ಏನೂ ಪ್ರಶ್ನೆ ಕೇಳಬೇಕಾಗಿರಲಿಲ್ಲ. ಅವರು ತಾವಾಗಿಯೆ ತಮ್ಮ ನಿರರ್ಗಳವಾದ ಶೈಲಿಯಲ್ಲಿ ಭಾಷಣ ಪ್ರಾರಂಭಿಸಿದರು.

"ನಿಮ್ಮದೆಲ್ಲಾ ನನಗೆ ಗೊತ್ತಿದೆ. ನೀವೇ ನನ್ನನ್ನು ಗುರುತಿಸಿರಲಿಕ್ಕಿಲ್ಲ. ನಾನು ಚಂದ್ರಕಾಂತನ ಅಣ್ಣ" ಹೀಗೆಂದು ಅವರು ತಮ್ಮ ಧೋತರ ಚುಂಗನ್ನು ಹೊರಗೆ ತೆಗೆದು ತಮ್ಮ ಮುಖವನ್ನು ಒರೆಸಿಕೊಂಡರು. "ಸ್ವಲ್ಪ ನೀರು ಕೊಡುತ್ತೀರಾ?" ಎಂದು ಕೇಳಿದರು.

"ದಣಿದು ಬಂದಿದ್ದೀರೆಂದು ಕಾಣುತ್ತದೆ. ಬಿಸಿನೀರನ್ನೇ ಕೊಡ್ತ್ತೀನೆ" ಎಂದೆ.

"ಹೊಂ ಅದೂ ಆಗಬಹುದು. ಈಗ ಸ್ವಲ್ಪ ನೀರು ಕೊಡಿರಿ" ಹಾಗೆಯೆ ಅವರು ಮುಂದುವರಿಯುತ್ತ ಹೇಳಿದರು. "ನೋಡಿರಿ. ನಮ್ಮದು ಭಿಡೆ ಸ್ವಭಾವನೆ ಅಲ್ಲ. ನಾವು ದಿನಾಲು ಹಳ್ಳಿ ಹಳ್ಳಿ ತಿರುಗುವವರು. ಭಿಡೆ ಮಾಡಿದರೆ ಬದುಕುವುದೇ ಸಾಧ್ಯವಿಲ್ಲ."

ನಾನು ನೀರು ತರಿಸಿಕೊಟ್ಟೆ. ಒಳಗೆ ಚಹದ ತಯಾರಿಯೂ ಸಾಗಿತು. ಆಸಾಮಿ ಜೋರಾಗಿಯೇ ಕಾಣುತ್ತದೆಂದು ಅವಲಕ್ಕಿಯ ಸಿದ್ಧತೆಯನ್ನೂ ಮಾಡಲು ಹೇಳಿದೆ.

ನಾನು ಒಳಗಿನಿಂದ ಬರುತ್ತಲೇ ಕೇಳಿದೆ, "ನೀವು ಹಳ್ಳಿ ಹಳ್ಳಿ ತಿರುಗುತ್ತೀರೆಂದ ಮೇಲೆ ........ ನೀವು?"

"ಹೌದು ............ ಹೌದು ............ ಅದೇ ಶಾನಭೋಗರ ಕೆಲಸ. ಒಂದು ಹಳ್ಳಿಯಲ್ಲ- ಎರಡು ಮೂರು ಹಳ್ಳಿ ಶ್ಯಾನಭೋಕಿ ಅವೆ ನಮ್ಮವು. ನೋಡಿರಿ, ನಿಮ್ಮ ಸಂಗಡ ಒಂದು ಮಹತ್ವದ ಸಂಗತಿ ಕೇಳಲಿಕ್ಕೆ ಬಂದಿರುವೆ"

"ಏನದು?" ಎಂದೆ.

"ನಮ್ಮ ಚಂದ್ರಕಾಂತ ...... ನಿಮ್ಮಲ್ಲಿ ......?"

"ಬಂದಿದ್ದರು. ಒಂದು ದಿನ ಮಾತ್ರ ........

"ಆದಾಯಿತು. ಆದರೆ ಏನಾದರೂ ........?"

"ಸ್ವಲ್ಪ ಸುತ್ತು ಮುತ್ತು ನೋಡಿದರು. ತರುವಾಯ ಪಿಸುಮಾತುಗಳಲ್ಲಿ "ಹಣ ಏನಾದರೂ ಒಯ್ದಿದ್ದಾನೆಯೆ?" ಎಂದು ಕೇಳಿದರು.

"ಹೌದು. ಏಸೋ ರೂಪಾಯಿ ಐವತ್ತು ತೆಗೆದುಕೊಂಡಿದ್ದಾರೆ." ಎಂದು ಹೇಳಿದೆ.

"ಅದಕ್ಕೇ ಅಂದೆ. ಲುಚ್ಚಾ! ಥೇಟ ಲುಚ್ಚ್ಯಾರಿ ಅವನು" ಎಂದು ಮೇಜಿನ ಮೇಲೆ ತಮ್ಮ ಕೈ ಜೋರಾಗಿ ಬಡಿದು ಅಂದರು. ಅವರ ಧ್ವನಿಯಲ್ಲಿಯೂ ಜೋರು ಬಂದಿದ್ದಿತು.

"ಅಲ್ರಿ ರಾಯರ, ಅವರಿಗೆ ಹಾಗೇಕೆ ಅನ್ನಬೇಕು? ಅವರಿಗೇನೊ ತ್ರಾಸವಿದೆಯೆಂದು ಕಾಣುತ್ತದೆ."

"ತ್ರಾಸ? ಇವರದು ಮುಗಿಯುವ ಹಾಗೇ ಇಲ್ಲ. ಇವನ ಹೆಂಡತಿಗೆ ಮಾಡಿ ಮಾಡಿ ನಮ್ಮ ಅವ್ವ ಬೇಸತ್ತು ಹೋದಳು. ಇವನು ಲಗ್ನಮಾಡಿಕೊಂಡ! ............ ಆ ಕಡೆ ಚಳವಳಿ ಎಂದು ಊರುಬಿಟ್ಟು ಹೋಗಿಬಿಟ್ಟ! ಯಾರು ಮಾಡಬೇಕು? ಇವನ ಹೆಂಡತಿ ನೋಡಲಿಕ್ಕೆ ಕರಪರಗೊಂಬಿ. ಏನೂ ತ್ರಾಣ ಇಲ್ಲ. ನೂರೆಂಟು ಬ್ಯಾನಿ. ತೀರ್ಥ ಕುಡಿದರೆ ನೆಗಡಿ, ಆರತಿ ತೆಗೆದುಕೊಂಡರೆ ಕಾವು.

ನಾನೇನೋ ನಡುವೆ ಪ್ರಶ್ನೆ ಕೇಳಬೇಕೆಂದಿದ್ದೆ. ಆದರೆ ಅವರ ಆವೇಶ ಹೆಚ್ಚುತ್ತಿದ್ದುದರಿಂದ ನಾನು ಮೌನವಾಗಿ ಕೂಡಬೇಕಾಯಿತು.

ಅತಿಥಿದೇವರೇ ಹೇಳಲು ಮುಂದುವರಿದರು. "ನೋಡ್ರಿ, ನಿಜ ಸಂಗತಿ ಹೇಳಬೇಕು ಅಂದರೆ, ಆಣೆ ಮಾಡಿ ಹೇಳಬೇಕು. ಅಂದರೆ ನಮ್ಮ ಮನೆತನ ಎಲ್ಲಾ ಹಾಳುಮಾಡಿಬಿಟ್ಟ ಚಂದ್ರಕಾಂತ! ಅವನು ಜೇಲಿಗೆ ಹೋದದ್ದರಿಂದ ನಮ್ಮ ಆಸ್ತಿ ಜಪ್ತ ಆದವು. ಈಗಿನ ಕಾಂಗ್ರೆಸ ಸರಕಾರ ದವರು ಏನು ಕೊಟ್ಟರು ಇವನಿಗೆ ಆ್ಞ s ...... ?"

ಪ್ರಶ್ನೆ ಕೇಳುವ ಹೊತ್ತಿಗೆ ಚಹ ಬಂದಿತು, "ನಿಮಗೇನಾದರೂ ಇದರ ಸಂಗಡ ಬೇಕೆ?" ಎಂದು ಸಹಜವಾಗಿ ಕೇಳಿದೆ.

"ಓಹೋ ಅದರಲ್ಲೇನು? ನಾನು ನಿಮಗೆ ಮೊದಲೇ ಹೇಳಿರುವೆ ನಲ್ಲ?" ಎಂದು ಹುರುಪಿನಿಂದ ಅಂದರು.

ನಾನು ಎಣಿಸಿದುದು ನಿಜವೇ ಆಯಿತು!

ಅವರು ಮತ್ತೆ ತಮ್ಮ ವಾದಸರಣಿಯನ್ನೆ ಎತ್ತಿ ಹೇಳಿದರು. "ನೋಡಿರಿ, ಈಗ ಹಣ ತೊಟ್ಟು, ಮನೆಬಿಟ್ಟು ಹೊರಗೆ ಬಂದಿರುವ ತನಗಾ ದರೂ ಏನಾದರೂ ನೌಕರಿ ಇದೆಯೇನು? ನಮ್ಮಲ್ಲಿ ಇದ್ದುಕೊಂಡು ಕುಲ ಕರ್ಣಿಕಿ ಮಾಡು ಅಂದರೆ ಕೇಳಲಿಲ್ಲ. ಹಿರಿಯರ ಮಾತು ಕೇಳುವ ಹಾಗೆಯೆ ಇಲ್ಲ. ಹೀಗೆ ಆದರೆ ಸಂಸಾರ ಸುರಳೀತ ಹೇಗೆ ಸಾಗಬೇಕು, ನೀವೆ ಹೇಳ್ರಿ? ಏನೊ ಹೇಳುವನು. ಹಳ್ಳಿ ಹಳ್ಳಿ ಪಿರಿ ಪಿರಿ ತಿರುಗುವನು. ಏನು ಕೆಲಸವೊ ಏನೊ ಯಾರಿಗೂ ತಿಳಿಯುವ ಹಾಗಿಲ್ಲ. ನನ್ನ ಬಿಟ್ಟು ಬಿಡಿರಿ. ಸ್ವತಃ ಅಪ್ಪನಿಗಾದರೂ ಹೇಳಬೇಕೊ ಬೇಡವೊ? ಏನೊ ಸುಳ್ಳು ಹೇಳುತ್ತ ತಿರುಗು ವನು. ಏನೊ ಸಮಾಜ ಸೇವೆಯ ಹುಚ್ಚು ಅವನಿಗೆ! ರಾಜಕಾರಣದ ಹುಚ್ಚು ಅವನಿಗೆ! ಬೆಕ್ಕು ತಿರುಗಿದ ಹಾಗೆ ತಿರುಗುತ್ತಾನೆ. ಹೆಂಡತಿ ಒಂದು ಕಡೆಗೆ, ತಾನು ಒಂದು ಕಡೆಗೆ! ಏನು ಹೇಳಲಿ ಅವನ ಮಹಿಮಾ! ರಾಮ ರಾಮ! ಸಾಕಾಗಿಹೋಗಿದೆ. ಈಗ ಸಾಲಾ ಮಾಡಿದ್ದಾನೆ. ಅದೊಂದು

ಬೇರೆ. ಎಲ್ಲಾ ಭಂಗಾರದ ಸಾಮಾನು ಹೋದವು ...... ಓಹೋ ಮರತೆ ...... " ಪಿಸ ಮಾತಿನಲ್ಲಿ ಅವರು ಕೇಳಿದರು, " ಏನಾದರೂ ನಿಮ್ಮಲ್ಲಿ ಒತ್ತಿ ಇಟ್ಟಿದ್ದಾನೆಯೇ ? "

" ಏನೂ ಇಲ್ಲ " ಎಂದು ಸರಳವಾಗಿ ಹೇಳಿದೆ.

" ಲುಚ್ಚಾ್ಯ ! ಬಿಲವಾರ ಇಟ್ಟಿದ್ದೇನೆ ಅಂತ ಅವ್ವಗ ತಿಳಿಸಿದ್ದಾನೆ. ಎಷ್ಟು ಸುಳ್ಳು ! ಅವೂ ನನ್ನ ಹೆಂಡತಿ ಬಿಲವಾರ! ಏನೋ ಪಾಪ! ಇವನ ಹೆಂಡತಿ ಕೈಯಲ್ಲಿ ಇರಲಿ ಎಂದು ನಾನು ಪ್ರೀತಿಯಿಂದ ಕೊಡಿಸಿದ್ದೆ. ಥೇಟ ಲುಚ್ಚಾ್ಯ. ಅವುಗಳನ್ನು ಕೊಡಬಾರದೂ ಅಂತ ಈ ಸೋಗು ! ನನ್ನ ಹೆಂಡತಿ ಸತ್ತು ಹೋದಳು. ಇವನಿಗೇಕೆ ಬೇಕು ? ಎಂದು ತೀದಿದ್ದಾನೆ, ಅವನು !"

" ನಿಮ್ಮ ಮನೆಯವರು ತೀರಿಕೊಂಡಿದ್ದಾರೇನು ? ಎಷ್ಟು ದಿವಸವಾದವು ? " ಎಂದು ಅವರ ಮಾತುಗಳ ಮಧ್ಯದಲ್ಲಿಯೆ ಕೇಳಿದೆ.

" ಈ ನಮ್ಮ ಚಂದ್ರಕಾಂತ ಲಗ್ನವಾದ ಒಂದು ವರ್ಷದಲ್ಲಿಯೆ. ಯಾವ ಮುಹೂರ್ತದಿಂದ ಅವಳು ನಮ್ಮ ಮನೆಯಲ್ಲಿ ಕಾಲಿಟ್ಟಳೋ! ಅತ್ತೆಯ ಮನೆಗೆ ಬಂದವಳು ಒಂದೂ ಕೆಲಸ ಮಾಡಲಿಲ್ಲ. ಗೊಂಬಿಯ ಹಾಗೆ ಕೂತು ಬಿಡುತ್ತಿದ್ದಳು. ಎಲ್ಲಾ ಕೆಲಸಗಳ ಭಾರ ಇವಳ ಮೈಮೇಲೆ. ಕೆಲಸ ಮಾಡಿ ಮಾಡಿ ಜಡ್ಡು ಹಚ್ಚಿಕೊಂಡು

" ಪಾಪ! ಈ ವಯಸ್ಸಿನಲ್ಲಿ ನಿಮಗೆ ತ್ರಾಸವಾಗಿರಬೇಕು ! ಅಲ್ಲವೆ ? "

" ಈ ತ್ರಾಸ ಹೇಗಾದರೂ ತಡೆದುಕೊಳ್ಳಬಹುದು. ಆದರೆ ಈ ಚಂದ್ರಕಾಂತನದು ಹೇಗೆ ತಡೆದುಕೊಳ್ಳಬೇಕು! ನಮ್ಮ ಅವ್ವ ಇವರ ಸಂಸಾರದ ಸಲುವಾಗಿ ಚಿಂತೆಹಚ್ಚಿಕೊಂಡು ಸಾಯಲಿಕ್ಕೆ ಆಗಿದ್ದಾಳೆ. ಅದಕ್ಕೆ ಬಂದೆ ಈಗ ...... ! ಇವನು ಚಳವಳಿಯಲ್ಲಿರುವಾಗ ಎಲ್ಲವನ್ನೂ ನೋಡಿಕೊಂಡು ಹೋಗುತ್ತಿದ್ದೆ. ಎಲ್ಲವೂ ಸುಸೂತ್ರ ಸಾಗಿತ್ತು ! ಈಗ ಹೇಗೆ ಆಗಿದೆ. ನೋಡಿರಿ. ನಮಗಂತೂ ಇವನ ಮುಖ ನೋಡಬಾರದು; ಇವನ ಮನೆಯಲ್ಲಿ ಕಾಲಿಡಬಾರದು ಅಂತ ಅನಿಸಿಬಿಟ್ಟಿದೆ. ನೋಡ್ರಿ, ಇದೊಂದೇ

ಉದಾಹರಣೆ. ನಮ್ಮ ಮನೆಯಲ್ಲಿ ಬಾಣಂತನ ಮಾಡಿಸಲಿಕ್ಕೆ ಬರುತ್ತಿದ್ದಿಲ್ಲವೆ? ನಮ್ಮ ಅವ್ವ ಸತ್ತಿರುವಳೇನು ಇವರ ಪಾಲಿಗೆ? ಲುಚ್ಚ್ಯಾ! "

ಅವರು ಹೊರಡಲು ತಯಾರಾದರು. "ಇನ್ನೂ ಸ್ವಲ್ಪ ಕುಳಿತು ಹೋಗಬಹುದಲ್ಲ?" ಎಂದು ಬಿನ್ನವಿಸಿದೆ. ಆದರೆ ಅವರು ಕೇಳಲಿಲ್ಲ "ನೀವು ಕೆಲಸದವರು. ನಿಮ್ಮ ಹೊತ್ತು ಏಕೆ ಹಾಳುಮಾಡಬೇಕು? ಬರುತ್ತೇನೆ" ಎಂದು ಹೊರಟೇ ಬಿಟ್ಟರು

ಅವರು ಹೊರಗೆ ಹೋಗುವುದನ್ನು ನೋಡಿದೆ. ಆದರೆ ಅವರು ಆ ಮನೆಯ ಕಡೆಗೆ ಆಗ ಹೊರಳಿ ಸಹ ನೋಡಲಿಲ್ಲ. ಇಕ್ಕಿದ ಬಾಗಿಲು ಹಾಗೆಯೇ ಇತ್ತು.

ಅವರಿಗೆ ನಾನು ಅ ತಿ ಥಿ ದೇ ವ ರೆಂ ದೆ ಕರೆಯುತ್ತಿದ್ದೇನೆ ಏಕೆಂದರೆ ಕೊನೆಯವರೆಗೂ ಅವರ ಹೆಸರು ನನಗೆ ಗೊತ್ತಾಗಲಿಲ್ಲ. ಆ ಅತಿಥಿದೇವರ ಮಾತುಗಳನ್ನು ಕೇಳಿ ನನ್ನಾಕೆ ಎಂದಳು, "ಸುಮ್ಮನೇ ನೀವು ಏನಾದರೂ ಗೊಂದಲದಲ್ಲಿ ಬೀಳುತ್ತೀರಿ" ಎಂದು. ಅವಳ ಮಾತುಗಳು ನಿಜವಾಗಿದ್ದವು. ನನಗೆ ಏನೂ ತಿಳಿಯದಾಯಿತು.

ಮರುದಿನ ಬೆಳಿಗ್ಗೆ ಚಂದ್ರಕಾಂತ ನಮ್ಮ ಮನೆಗೆ ಬಂದರು ಅವರು ಒಳಗೆ ಬಂದವರೆ ನೇರವಾಗಿ ಪ್ರಶ್ನೆ ಕೇಳಿದರು. 'ನಿನ್ನೆ ನಿಮ್ಮ ಮನೆಗೆ ನಮ್ಮ ಅಣ್ಣ ಬಂದಿದ್ದನೇನು?' ಎಂದು.

'ಅಹುದು ...... ಏಕೆ?' ಎಂದು ಕೇಳಿದೆ.

"ಅವನು ಭಯಂಕರ ಇದ್ದಾನೆ" ಎಂದು ಚಂದ್ರಕಾಂತ ನುಡಿದರು. "ನಿಮ್ಮ ಮುಂದೆ ಏನು ಹೇಳಿದ ?"

ಎಲ್ಲವನ್ನೂ ಇವರ ಮುಂದೆ ಯಾವ ರೀತಿ ಹೇಳಬೇಕು? ನಾನು ಸುಮ್ಮನೆ ನಕ್ಕುಬಿಟ್ಟೆ.

ಚಂದ್ರಕಾಂತ ಹೇಳಿದರು "ಇಲ್ಲ, ಏನಾದರೂ ಹೇಳಿರಲೇಬೇಕು. ನನ್ನ ಹಣದ ವಿಷಯ ಕೇಳಿದನಲ್ಲವೆ ?"

"ಅಹುದು, ಕೇಳಿದರು."

"ಆಭರಣ ವಿಷಯ ಕೇಳಿದನೆ ?"

"ಹೂಂ, ಅದನ್ನೂ ಕೇಳಿದರು."

"ನೋಡಿರಿ ಎಷ್ಟು ಭಯಂಕರ ಇರುವನು !" ಚಂದ್ರಕಾಂತರ ಮುಖದಲ್ಲಿ ಉದ್ವಿಗ್ನತೆ ಇತ್ತು.

"ಏನಾಗಿದೆ ಈಗ ?" ಎಂದು ಕೇಳಿದೆ.

"ಏನಾಗಬೇಕು ? ನನಗೆ ಹಣ ಕೊಡುತ್ತೇನೆಂದು ಹೇಳಿದ. ಭಂಗಾರದ ಆಭರಣ ಕೊಟ್ಟುಬಿಟ್ಟೆ ವಿಶ್ವಾಸದಿಂದ. ಈಗ ಅವೆಲ್ಲವನ್ನು ಮಾಯ ಮಾಡಿ ಬಿಟ್ಟಿದ್ದಾನೆ."

"ಅಬ್ಬಾ ! ಹೀಗೋ ? ?"

"ಹೂಂ! ಅದಲ್ಲದೇ ಇದ್ದುಬಿದ್ದ ಸ್ವಲ್ಪ ಬಂಗಾರವೆಲ್ಲವೂ ತನ್ನದೇ ಅನ್ನುತ್ತಾನೆ."

"ಬಿಲಾವರ ?"

"ಹೂಂ ! ಅದೇ ಆ ಬಿಲವಾರ ಅವ್ವ ಕೊಟ್ಟಿದ್ದಾಳಂತೆ ತನ್ನವೆನ್ನುತ್ತಾನೆ."

"ನಿಜವೇ ?"

"ಹೂಂ ! ಇಷ್ಟೇ ಅಲ್ಲದೇ...."

"ಏನ್ರಿ, ಚಂದ್ರಕಾಂತ ಏನದು ?"

"ನೀವು ಬಹಳ ಒಳ್ಳೆಯವರು. ನಿಮ್ಮ ಮುಂದೆ ಹೇಳಿ ಬಿಡುತ್ತೇನೆ. ಯಾರಿಗೂ ಹೇಳಬೇಡಿರಿ. ನನ್ನ ಅಣ್ಣ ಕೆಟ್ಟ ಸ್ವಭಾವದವ. ನಾನು ಚಳವಳಿಯಲ್ಲಿರುವಾಗ ನನ್ನ ಹೆಂಡತಿ ಒಬ್ಬಳೇ ಇದ್ದಳು. ಆಗ....!"

ಚಂದ್ರಕಾಂತರ ಮಾತಿನ ಅರ್ಥ ಕೂಡಲೇ ಆಯಿತು. "ಅಯ್ಯೋ ಪಾಪ !" ಎಂದು ಮರುಗುವಂತಾಯಿತು

"ಇವಳು ಗಟ್ಟಿ ಅವನ ಆಟವನ್ನು ಸಾಗಗೊಟ್ಟಿಲ್ಲ! ಏನು ಹೇಳಲಿ? ಅಣ್ಣನು ನಾನು ಅಲ್ಲಿ ಇರಬೇಕೆಂದು ಮುದ್ದಾಂ ಬಯಸುತ್ತಿದ್ದಾನೆ. ನಾವು ಅವನ ಸಲುವಾಗಿ ಊರುಬಿಟ್ಟು ಬಂದಿದ್ದೇವೆ. ಇನ್ನು ಅಲ್ಲಿಗೆ ಹೋಗುವದೆ ಇಲ್ಲ. ಬೇಕಾದಷ್ಟು ಕಷ್ಟ ಬರಲಿ!....ಆ ಊರಲ್ಲಿದ್ದರೆ ಇವಳಿಗೆ ಏನೂ ಶಾಂತಿ ಇಲ್ಲ. ಇವಳ ಜೀವನ...."

ಚಂದ್ರಕಾಂತನ ಕಣ್ಣುಗಳಲ್ಲಿ ಕಂಬನಿ ತುಂಬಿದವು. ದೊಡ್ಡ ಹನಿಗಳು ಒಣ ಗಲ್ಲಗಳ ಮೇಲೆ ಉದುರಿದವು.

"ಚಂದ್ರಕಾಂತ, ನೀವು ಅವಳೊಬ್ಬಳನ್ನೇ ಬಿಟ್ಟು ಹೋಗಿಬಿಡುತ್ತೀರಿ. ಅವಳು ಏನು ಮಾಡಬೇಕು ?"

"ನಾನು ಏನು ಮಾಡಬೇಕು ? ಹೊಟ್ಟೆಗಾಗಿ ದುಡಿಯಬೇಕಲ್ಲ? ಮುಲ್ಕಿಪರೀಕ್ಷೆಗೆ ನಮ್ಮ ಶಿಕ್ಷಣ ನಿಂತುಬಿಟ್ಟಿದೆ. ನಮಗೆ ಯಾರು ನೌಕರಿ ಕೊಡಬೇಕು ? ಏನೊ ರಾಜಕಾರಣದಲ್ಲಿ ಓಡಾಡಿದ್ದರಿಂದ ಗ್ರಾಮೋದ್ಯೋಗದಲ್ಲಿ ಕೆಲಸ ಸಿಕ್ಕಿದೆ. ಅದರ ಸಲುವಾಗಿ ಹಳ್ಳಿಹಳ್ಳಿ ತಿರುಗಬೇಕು. ಇಲ್ಲವಾದರೆ ನಮ್ಮ ಗತಿ? ನೋಡಿರಿ, ಡಾಕ್ಟರ ಬಿಲ್ಲು ಕೊಡಬೇಕು........ಅದಿರಲಿ ನನ್ನಲ್ಲಿ ನಿಮ್ಮ ವಿಶ್ವಾಸವಿರಲಿ. . ನಿಮ್ಮ ಹಣ ನಾನು ಕೊಟ್ಟೇಕೊಡುವೆ."

"ಚಂದ್ರಕಾಂತ, ನನ್ನ ಹಣದ ಬಗ್ಗೆ ಚಿಂತಿಸಬೇಡಿ. ಮೊದಲು ಉಳಿದುದು ಸರಿಹೋಗಲಿ."

ಭಾರವಾದ ಹೃದಯದಿಂದ ಚಂದ್ರಕಾಂತ ನಮ್ಮ ಮನೆಯಿಂದ ಎದ್ದು ಹೋದರು!

ಆ ದಿನ ರಾತ್ರಿ ನನ್ನ ಕೋಣೆಯಲ್ಲಿ ಮಲಗಿದಾಗ ಅದೇ ಚಿತ್ರ ನನ್ನ ಮುಂದೆ. ಚಂದ್ರಕಾಂತ, ಅವರ ಅಣ್ಣ, ಶಾಂತಾ!!! ಮೂವರ ರೂಪಗಳೂ ನನ್ನ ಕಣ್ಣೆದುರು ಹಾದುಹೋಗುತ್ತಿದ್ದವು. ಅವರೆಲ್ಲರೂ ನನ್ನೆದುರು ನಿಂತು ಏನೇನೋ ಮಾತನಾಡುತ್ತಿದ್ದರು. ಅಡಕೊತ್ತಿನಲ್ಲಿರುವ ಅಡಕೆಯ ಹಾಗೆ ಶಾಂತಾಳ ಸ್ಥಿತಿ ಇರುವದೆಂದು ಅನಿಸುತ್ತಿತ್ತು........ಜೀವನದಲ್ಲಿಯ ದುಃಖಿದಾಳವನ್ನು ಅಳೆದು ನೋಡುತ್ತಿದ್ದೆ!

ಹೊರಗೆ ಏನೋ ಸಪ್ಪಳವಾಯಿತು. ಯಾರೊ ಗುದ್ದಾಡುವಂತೆ ಧ್ವನಿ ಕೇಳಿಸಿತು. ನನ್ನ ಹಾಸಿಗೆಯಲ್ಲಿಯೇ ನಾನು ಹೊರಳಾಡುತ್ತಿದ್ದೆ. ಬಾಗಿಲದ ಹತ್ತಿರ ಸಪ್ಪಳ ಜೋರಾಗಿ ಉಂಟಾಯಿತು. ಯಾರೋ ಕೆಳಗೆ ಬಿದ್ದಂತೆಯೂ ಕೇಳಿಸಿತು. ಲಗುಬಗೆಯಿಂದ ಎದ್ದು ಕಿಡಿಕಿಯಲ್ಲಿ ನೋಡಿದೆ.

ಅವಳು ಶಾಂತಾ! ಕೈಯಲ್ಲಿ ಮಿಣಿ ಮಿಣಿ ದೀಪ! ಎದೆಯುಬ್ಬಿ ಬರುತ್ತಿದೆ! ಸೀರೆಯ ಸೆರಗು ಹೇಗೋ ಬಿದ್ದಿದೆ! ಕೂದಲು ಅಸ್ತವ್ಯಸ್ತ ವಾಗಿದೆ! ಒಂದೇ ಸವನೆ ಉಸಿರುಬಿಡುವ ಧ್ವನಿ ಕೇಳಿಸುತ್ತಿದೆ! ಅವಳು ಶಾಂತಾ!! ಮನಸ್ಸಿನಲ್ಲಿ ಏನೂ ಶಾಂತತೆ ಇರಲಿಲ್ಲ! ಯಾರ ಸಂಗಡವೋ ಜಗಳಾಡಿರಬೇಕು! ಪ್ರಕ್ಷುಬ್ಧ ಸಮುದ್ರದಂತೆ ಮಿಣಿ ಮಿಣಿ ದೀಪದ ಬೆಳಕಿನಲ್ಲಿ ಇವಳ ಮುಖ ಕಾಣಿಸುತ್ತಿದ್ದಿತು!....ದಾರಿಯಲ್ಲಿ ಯಾವುದೋ ವ್ಯಕ್ತಿಯು ಜೋರಾಗಿ ಹೆಜ್ಜೆಗಳನ್ನು ಅಪ್ಪಳಿಸುವುದು-ಕೇಳಿಬರುತ್ತಿದ್ದಿತು !!

ಮಿಣಿ ಮಿಣಿ ದೀಪ ಮಾಯವಾಯಿತು! ಬಾಗಿಲು ಬಂದಾಯಿತು.

ಮರುದಿನ ರಾತ್ರಿ ಗೋಪುರದ ಗಡಿಯಾರವು ಢಣ್ ಢಣ್ ಎಂದು ಹತ್ತು ಬಾರಿಸಿತು. ನಾನು ನನ್ನ ಕೋಣೆಯಲ್ಲಿ ಓದುತ್ತ ಕುಳಿತಿದ್ದೆ. ಕಿಡಕಿಯಲ್ಲಿ ಒಮ್ಮೆಲೆ ನನ್ನನ್ನು ಕೂಗಿದ ಧ್ವನಿ ಕೇಳಿಸಿತು.

"ಓಹೋ ಚಂದ್ರಕಾಂತ, ಬನ್ನಿ ಒಳಗೆ" ಎಂದು ಕರೆದೆ. ಅವರು ಒಳಗೆ ಬರಲು ನಿರಾಕರಿಸಿದರು. ಕಿಡಿಕೆಯೊಳಗೆ ತಮ್ಮ ಕೈಯನ್ನು ಮುಂದಕ್ಕೆ ಮಾಡಿ 'ತಗೊಳ್ಳಿ' ಎಂದರು.

ಅವರ ಕೈಯಲ್ಲಿ ರೂಪಾಯಿ ನೋಟುಗಳು ಇದ್ದವು. "ಇಷ್ಟೇನು ಅವಸರವಿತ್ತು?........ಇರಲಿ. ಒಳಗಾದರೂ ಬನ್ನಿರಲ್ಲ?" ಎಂದು ಮತ್ತೆ ಬಿನ್ನವಿಸಿದೆ.

ಚಂದ್ರಕಾಂತ ಕಿಡಕಿಯಲ್ಲಿಯೆ ನಿಂತು ನೇರವಾಗಿ ಒಂದು ಪ್ರಶ್ನೆ ಕೇಳಿದ—"ನಿನ್ನೆ ನಮ್ಮ ಅಣ್ಣಾ ಇಲ್ಲಿ ಇದ್ದರೇನು?"

"ಯಾವಾಗ?"

"ನಿನ್ನೆ ರಾತ್ರಿ" ಚಂದ್ರಕಾಂತ ತುಟಿ ಕಚ್ಚಿದರು. ಪ್ರತಿಸಲದಂತೆ ಅವರ ಮುಖ ಇರಲಿಲ್ಲ. ಯಾವುದೋ ಸಂಶಯ, ಯಾವುದೋ ಚಿಂತೆ ಅವರ ಮನದಲ್ಲಿ ಮನೆಮಾಡಿಕೊಂಡಿತ್ತು.

ನಾನು ಹೇಳಿದೆ, "ನನಗೇನೂ ಗೊತ್ತಿಲ್ಲ. ಆದರೆ....?"

"ನೀವು ಹೇಳಲು ಏನೂ ಅಭ್ಯಂತರವಿಲ್ಲ. ನನ್ನ ಹೃದಯದ ಬಾಗಿಲನ್ನೆ ನಿಮ್ಮೆದುರು ತೆರೆದಿಟ್ಟಿದ್ದೇನೆ. ಏಕೆ ಹೇಳಬಾರದು ?"

"ಹಾಗೇನೂ ಇಲ್ಲ. ಆದರೆ........ರಾತ್ರಿ ಏನೋ ಸಪ್ಪಳವಾಯಿತು. ಯಾರೋ ಬಂದಂತೆ ಕಂಡಿತು. ನಿಮ್ಮ ಅಣ್ಣ ಇದ್ದರೂ ಇರಬಹುದು."

"ಅಹುದು, ಅವನೇ ಬಂದಿದ್ದನು. ನನಗೆಲ್ಲ ಸುದ್ದಿ ಗೊತ್ತಾಗಿದೆ. ನಾನು ಅವಳ ಮಾತಿಗೆ ಬಲಿ ಬಿದ್ದೆ........ಹೆಣ್ಣಿನ ಹೃದಯ ತಿಳಿಯುವದಿಲ್ಲ........"

ಚಂದ್ರಕಾಂತ ಭಾರವಾದ ಮನಸ್ಸಿನಿಂದ ತಮ್ಮ ತಲೆಯನ್ನು ತಗ್ಗಿಸಿ, ಕಿಡಿಕೆಯ ಸಲಾಕಿಗೆ ತಲೆಯನ್ನು ಆನಿಸಿದರು. ಅವರ ಕಣ್ಣುಗಳು ವಿಲಕ್ಷಣ ಭಾವವನ್ನು ವ್ಯಕ್ತಪಡಿಸಿದವು. ಅವರ ಮುಖ ಬೆವರತೊಡಗಿತು.

"ಇಲ್ಲಿಯೂ ಅವನು !!" ಚಂದ್ರಕಾಂತ ಆಶ್ಚರ್ಯವನ್ನು ತೋರಿಸುತ್ತ ಅಂದರು.

"ಒಳಗೆ ಬನ್ನಿ. ಎಲ್ಲವನ್ನೂ ಮಾತನಾಡೋಣ" ಎಂದೆ.

"ಇಲ್ಲ...ನಾನು ಬಲಿ ಬಿದ್ದೆ....ಬಿಲವಾರ ಅವನೆ ಕೊಟ್ಟಿರುವನಂತೆ.... ಇವಳೇ ಇಸಕೊಂಡಿರಬೇಕು....ಛೆ....ಇರಲಿ. ಅವನು ಬರುತ್ತಾನಂತೆ !.... ದಿನಾಲು !....ನಾನು ಬರುತ್ತೇನೆ....ಎಲ್ಲಾ ಮರೆತುಬಿಡಿ...ಏನೋ ನಮ್ಮ ಜೀವನ......"

ಚಂದ್ರಕಾಂತ ಹೊಯ್ದಾಡುತ್ತ ಕಿಡಕಿಯಿಂದ ಹೋದರು. ಬಾಗಿಲದ ಬಳಿ ಸ್ವಲ್ಪ ನಿಂತರು ! ಅತ್ತಿತ್ತ ನೋಡಿದರು ! ಮತ್ತೆ ಹೊರಗೆ ಹೋಗಿ

ಬಿಟ್ಟರು! ಅವರ ಹೆಜ್ಜೆಗಳ ಸಪ್ಪಳ ಆ ರಾತ್ರಿಯ ಆ ಶಾಂತವಾತಾವರಣ ದಲ್ಲಿ ಕೇಳಬರುತ್ತಿತ್ತು.

ಎರಡು ಮೂರು ದಿನಗಳು ಉರುಳಿದವು. ಮುಚ್ಚಿದ ಬಾಗಿಲ ಹಾಗೆಯೆ ಇವೆ. ಬಾಗಿಲದೊಳಗೆ ನಡೆಯುವ ವ್ಯವಹಾರವೇನೂ ತಿಳಿದು ಬರುತ್ತಿರಲಿಲ್ಲ. ಚಂದ್ರಕಾಂತರ ಸುದ್ದಿಯೇ ಇಲ್ಲ.

ಒಂದು ದಿನ ಬೆಳಗಿನಲ್ಲಿ ಬಾಗಿಲದ ಎದುರಿಗೆ ಮಾಲಕನ ದರ್ಶನ! ಗೋಣನ್ನು ಬಿಕ್ಕೊಂಡು. ಒಂದು ಬಡಿಗೆಯನ್ನು ಹಿಡಿದುಕೊಂಡು ನಿಂತಿದ್ದನು. "ನೋಡವಾ, ನಾಳಿಯೊಳಗಾಗಿ ಬಾಡಿಗೆ ರೂಪಾಯಿ ಕೊಡಲಿಕ್ಕೇ ಬೇಕು. ಎಷ್ಟು ದಿವಸ ಹೀಗೆ ಬಿಡಬೇಕು! ಬಾಕಿ ಚುಕ್ತಾ ಮಾಡಬೇಕು. ಈ ಮನೆಯೊಳಗೆ ಇರಬೇಕು. ಇಲ್ಲಾ ಅಂದರೆ.......ನಾನು ವಿತಕ್ಕೂ ಹೇಸುವವನಲ್ಲ. ನಿನ್ನನ್ನು ಹೊರಗೆಹಾಕಿ ಬಿಡುತ್ತೇನೆ. ನಿನ್ನ ಯಜಮಾನರಂತೂ ಊರೊಳಗೆ ಇರುವ ಹಾಗೇ ಇಲ್ಲ. ನಾನು ಯಾರನ್ನು ಕೇಳಬೇಕು? ನನಗೇನು ಕಿಮ್ಮತ್ತು ಇಲ್ಲ? ನೋಡು ನಾಳೆ ಕೊಡಲಿಕ್ಕೇಬೇಕು."

ಮನೆಯ ಮಾಲಕನು ಫಡಫಡನೆ ಮಾತನಾಡಿ ಸಿಟ್ಟಿನಿಂದ ಕೋಲು ಬೀಸುತ್ತ ಹೋಗಿಬಿಟ್ಟನು!

ಅರ್ಧ ತಾಸಿನ ನಂತರ ಕಂಪೌಂಡರನ ಆಗಮನ! ಬಾಗಿಲು ಬಡಿದನು. ಬಾಗಿಲು ತೆರೆಯಲಿಲ್ಲ. "ನೋಡ್ರಿ, ನಾಳೆಯಾದರೂ ಬೇಕು. ಇಲ್ಲಾಅಂದರೆ ನಿಮ್ಮ ಮೇಲೆ ಖಟ್ಲೆಹಾಕುತ್ತೇವೆ ಅಂದಾರೆ ಡಾಕ್ಟರು."

ಕಂಪೌಂಡರ ಬಿಲ್ಲಿನ ಹಾಳೆ ಮಡಿಚಿಕೊಂಡು ಸಾಯಕಲ್ಲ ಹತ್ತಿಕೊಂಡು ಹೋದನು.

ಇಪ್ಪತ್ತು ನಿಮಿಷಗಳ ನಂತರ ಹಾಲಿನವ ಬಂದನು. "ರೊಕ್ಕಾ ಇಲ್ಲಾ ಅಂದರೆ ನಾವು ಏನುಮಾಡಬೇಕು! ನಾವು ಹೇಗೆ ಹಾಲು ಕೊಡಬೇಕು! ಇವೊತ್ತು ನಾನು ಕೊಡುವುದೇ ಇಲ್ಲ".

ಗವಳಿಯು ಹಾಲನ್ನು ತೆಗೆದುಕೊಂಡು ಹಾಗೆಯೇ ಹೋಗಿಬಿಟ್ಟನು!

ಇಷ್ಟು ಜನರು ಬಂದು ಹೋದರೂ ಅವಳು ಬಾಗಿಲವನ್ನೇನೂ ತೆರೆಯಲಿಲ್ಲ. ಒಳಗೆ ಕುಳಿತುಕೊಂಡು ಅವಳು ಮಾತುಗಳನ್ನು ಹೇಗೆ ಸಹನೆ ಮಾಡಿಕೊಳ್ಳುತ್ತಿದ್ದಳೊ!

ಅದೇ ದಿನ ರಾತ್ರಿ ಬಾಗಿಲು ಬಡಿದ ಸಪ್ಪಳವಾಯಿತು. ಒಂದು ವ್ಯಕ್ತಿ ಹೊರಗೆ ನಿಂತು "ಬಾಗಿಲೂ ಬಾಗಿಲೂ" ಎಂದು ಕೂಗಿಕೊಳ್ಳುತ್ತಿದ್ದಿತು. ಮಳೆ ಜಿಟಿ ಜಿಟಿ ಬೀಳುತ್ತಿತ್ತು. ಗಾಳಿ ಸೊಯ್ಯ್ ಎಂದು ಬೀಸುತ್ತಿತ್ತು. ಇಂಥ ವೇಳೆಯಲ್ಲಿ ಆ ಬಾಗಿಲದ ಹತ್ತಿರ ಯಾರು ಇರಬೇಕು? ಧ್ವನಿಯ ಮೇಲಿಂದ ಚಂದ್ರಕಾಂತರ ಅಣ್ಣಂದಿರೆ ಅಲ್ಲಿ ಇರಬಹುದೇನೋ ಎಂದು ಸಂಶಯ ಬಟ್ಟೆ!

ಬೆಳಗಿನ ಮಳೆ ನಿಂತಿದ್ದಿತು. ನಾನು ಕಿಡಿಕೆಯಲ್ಲಿ ಕುಳಿತು ನೋಡುವಾಗ ಒಬ್ಬ ಬಿಕ್ಷುಕ ಆ ಮನೆಯ ಬಾಗಿಲದ ಎದುರು ನಿಂತಿದ್ದನು. ಅವನು ಒಂದು ಏಕತಾರಿಯನ್ನು ಹಿಡಿದಿದ್ದನು. ಅದರ ತಂತಿಗಳನ್ನು ಜೋರಾಗಿ ಮೀಟುತ್ತ ತನ್ನದೇ ಆದ ಸುಂದರವಾದ ಧ್ವನಿಯಿಂದ ಕಿರಿಚಿಕೊಳ್ಳುತ್ತಿದ್ದ "ಬಾಗಿಲ ತೆರೆದು ವರವನು ಕೊಡುವೋ ಹರಿಯೇ...." ಎಂದು.

ನನ್ನಾಕೆ ಆತುರತೆಯಿಂದ ಬಂದು ಹೇಳಿದಳು "ಅವಳಿಗೆ ಬಹಳ ತ್ರಾಸ".

" ಯಾರಿಗೆ? "

" ಅವಳೇ ಚಂದ್ರಕಾಂತರ ಹೆಂಡತಿ. "

" ಏನಾಗಿದೆಯಂತೆ ? "

" ಎಷ್ಟೋ ದಿನವಾಯಿತಂತೆ! ಊಟವೇ ಇಲ್ಲವಂತೆ! ಏನೋ ಹಾಲು ಕುಡಿಯುತ್ತಿದ್ದಳಂತೆ! ನಿನ್ನೆ ಆದೂ ಇಲ್ಲವಂತೆ! ಪಾಪ ಹರುಕು ಸೀರೆ ಉಟ್ಟುಕೊಂಡು ಹಾಗೆಯೆ ಇದ್ದಾಳಂತೆ ! "

" ನಿನಗೆ ಇದನ್ನೆಲ್ಲ ಯಾರು ಹೇಳಿದರು ? "

"ಅವಳೇ ಆ ಕೆಲಸ ಮಾಡುವ ಹುಡುಗಿ. ಅವಳೇನೋ ನಿನ್ನೆ ಮಧ್ಯಾಹ್ನ ಒಳಗೆ ಹೋಗಿದ್ದಳಂತೆ. ಮನೆಯಲ್ಲಿ ಏನೂ ಇಲ್ಲನಂತೆ! ಪಾಪ!"

"ಚಂದ್ರಕಾಂತ ಎಂದು ಬರುವರಂತೆ?"

"ಏನೂ ತಿಳಿಯದಂತೆ"

"ನಾನೇ ನೋಡಿಕೊಂಡು ಬರುವೆ"

ನನಗೆ ಬಹಳ ಚಿಂತೆಯಾಯಿತು. ಲಗುಬಗೆಯಿಂದ ಅಲ್ಲಿಗೆ ಹೋದೆ. ಭಿಕ್ಷುಕ ಇನ್ನೂ ಹಾಡುತ್ತಿದ್ದ. "ಬಾಗಿಲವ ತೆರೆದೂ..." ನಾನು ಅಲ್ಲಿಗೆ ಹೋದ ಕೂಡಲೆ ಅವನು ಆ ತೆರೆದ ಬಾಯನ್ನು ಬಂದುಮಾಡಿದ.

ಬಾಗಿಲು ಬಡಿದೆ. ಒಳಗಿನಿಂದ ಏನೂ ಉತ್ತರ ಬರಲಿಲ್ಲ! ನನ್ನ ಮೇಲೂ ಏನಾದರೂ ಸಂಶಯ ತೆಗೆದುಕೊಂಡಿರುವರೋ ಏನೊ, ಎಂದು ನನ್ನ ಹೆಸರು ಹೇಳಿ ಕೂಗಿದೆ. ಆದರೂ ಉತ್ತರ ಬರಲಿಲ್ಲ. ಬಾಗಿಲು ನೂಕಿದೆ! ಬಾಗಿಲು ತೆರೆದಿತ್ತು! ಸಾವಕಾಶ ಒಳಗೆ ಹೋಗಿ ನೋಡಿದೆ. ಒಂದು ಉದ್ದನ್ನ ಕೋಣೆ. ನಡುವೆ ಒಂದು ಅರ್ಧ ಹಾಳು ಗೋಡೆ ಎದ್ದು ನಿಂತಿದೆ. ಈ ಮುಂದಿನ ಅರ್ಧ ಭಾಗದಲ್ಲಿ ಯಾರೂ ಕಾಣಲಿಲ್ಲ. ಧೈರ್ಯಮಾಡಿ ಒಳಗೆ ಹೆಜ್ಜೆ ಇಟ್ಟೆ. ಅಲ್ಲಿಯೂ ಅವಳು ಇರಲಿಲ್ಲ. ನನ್ನೆದೆ ಒಡೆದು ನೀರಾಯಿತು!

ಕೂಸು ಮಾತ್ರ ನೆಲದಮೇಲೆ ಇತ್ತು. ನಾನಲ್ಲಿಗೆ ಹೋದಕೂಡಲೇ ಕಣ್ಣು ತೆರೆದು ಒಂದು ಸಲ ನನ್ನನ್ನು ನೋಡಿತು!

ಆ ಕೂಸಿನ ಹತ್ತಿರವೇ ಒಂದು ಚೀಟಿ ಬಿದ್ದಿತ್ತು. ಅದನ್ನು ನನ್ನ ಕೈಯಲ್ಲಿ ತೆಗೆದುಕೊಂಡೆ. ನನ್ನ ಕೈಗಳು ನಡುಗಹತ್ತಿದವು. 'ಇದನ್ನು ಸಾಕುವ ಧೈರ್ಯವಿದ್ದವರು ಸಾಕಬಹುದು' ಎಂದು ಅದರಲ್ಲಿ ಬರೆದಿತ್ತು. ನನ್ನ ಕಣ್ಣುಗಳನ್ನೇ ನಾನು ನಂಬದಾದೆ! ನನ್ನ ದೇಹವೆಲ್ಲ ನಡುಗಿತು. ಕಣ್ಣಿಗೆ ಕತ್ತಲು ಕವಿದಂತಾಗಿ ನಾನು ಹೊರಗೆ ಬಂದೆ.

ಬಾಗಿಲು ತೆರೆದಿತ್ತು! ಕಂಪೌಂಡರ, ಮನೆಯ ಮಾಲಕ ಎಲ್ಲರೂ ಒಳಗೇ ಬಂದರು.

'ಬಾಗಿಲು ತೆರೆದು ವರವನು ಕೊಡುವೊ ಹರಿಯೆ' ಎಂದು ಭಿಕ್ಷುಕನ ಬೇಡಿಕೆಯ ಧ್ವನಿ ಇನ್ನೂ ಕೇಳಬರುತ್ತಿತ್ತು.

# ಕಲ್ಪನಾ.

ಇದು ಇಪ್ಪತ್ತು ವರ್ಷಗಳ ಹಿಂದಿನ ಕಥೆ! ಮಾತನಾಡುವ ಸಿನಿಮಾ ಪ್ರಪಂಚ ಅದೇ ಆಗ ದಕ್ಷಿಣ ಭಾರತದಲ್ಲಿ ತಲೆಯೆತ್ತಿದ್ದಿತು! ಸಿನಿಮಾದಲ್ಲಿ ಪಾತ್ರವಹಿಸುವ ನಟನಟಿಯರನ್ನು ಅಚ್ಚರಿಯ ಕಣ್ಣುಗಳಿಂದ ನೋಡುವ ಕಾಲವದು! ಸ್ವರ್ಗಲೋಕದಲ್ಲಿಯ ಸ್ತ್ರೀ ಪುರುಷರೆಂದೇ ಎಲ್ಲರೂ ಅವರನ್ನು ಭಾವಿಸುತ್ತಿದ್ದರು!

ಒಂದು ದಿನ ಬೆಳಗಿನಲ್ಲಿ ನಮ್ಮ ಓಣಿಯಲ್ಲಿಯ ಆ ದೊಡ್ಡ ಮನೆಯಲ್ಲಿ ಒಮ್ಮೆಲೆ ಜನಜಂಗುಳಿಯು ಕಂಡಿತು. ನಾಲ್ಕೈದು ಮೋಟಾರುಗಳು ನಿಂತಿದ್ದವು. ಅನೇಕ ಜನರ ಹರ್ಷೋದ್ಗಾರ, ಕೇಕೆಗಳು ಕೇಳಬರುತ್ತಿದ್ದವು. ಕವಿಗೆ ಒಮ್ಮೆಲೆ ಸ್ಫೂರ್ತಿ ಬಂದಂತೆ ಬೇರೆ ಬೇರೆ ರಾಗಗಳನ್ನು ತೆಗೆಯುತ್ತಿದ್ದರು. ನಮ್ಮ ಓಣಿಯಲ್ಲಿಯ ಎಲ್ಲ ಜನರೂ ಆದಿನ ಅವರನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿಯೇ ನೋಡಿದರು.

ಮನೆಯ ಮುಂದೆ ನಿಂತಿರುವ ಮೋಟಾರುಗಳನ್ನು ನೋಡಿ ನನ್ನ ಐದು ವರುಷದ “ ಪುಟ್ಟು ” ಅಲ್ಲಿ ಓಡಿಹೋಗುತ್ತಿದ್ದಳು. ಆ ಜನರಲ್ಲಿರುವ ಒಬ್ಬ ರೂಪವತಿ ಹೆಂಗಸು ಆ ಪುಟ್ಟುಳನ್ನು ಎತ್ತಿಕೊಂಡು, ಮುತ್ತಿಟ್ಟು ಕೈಯಲ್ಲಿ ಚಾಕಲೇಟ್ಸ್ ಬಿಸ್ಕೀಟ ಡಬ್ಬಿ ಮುಂತಾದವುಗಳನ್ನು ಕೊಟ್ಟುಕಳಿಸಿದಳು.

ನನ್ನ ಪುಟ್ಟುವಿನಿಂದಲೆ ಆ ಜನರ ಪರಿಚಯ ನನಗಾಗುವ ಪ್ರಸಂಗ ಬಂದಿತು. ನನ್ನ ಮಗಳನ್ನು ಎತ್ತಿಕೊಂಡ ಸ್ತ್ರೀಯು ನನ್ನನ್ನು ಒಂದು ದಿನ ಕರೆಯಿಸಿಕೊಂಡಳು. ಅವಳೆ ನನಗೆ ಎಲ್ಲ ಸಂಗತಿ ಹೇಳಿದಳು.

ಅದೊಂದು ಸಿನೆಮಾ ಕಂಪನಿ. ಕೃಷ್ಣಾ ನದಿ ತೀರದಲ್ಲಿರುವ ಸುಂದರವಾದ ಪ್ರಕೃತಿಯ ಮಡಿಲಲ್ಲಿ ಹಲವು ದೃಶ್ಯಗಳನ್ನು ತೆಗೆದುಕೊಳ್ಳಲು ಅವರು

ಸಮ್ಮೂರಿಗೆ ಬಂದಿದ್ದರು. ಸುಮಾರು ಐದಾರು ತಿಂಗಳಾದರೂ ತಾವು ಅಲ್ಲಿ ಇರಬಹುದಾಗಿ ಅವಳು ಹೇಳಿದಳು.

ಮಹಡಿಯ ಮೇಲೆ ಹೆಂಗಸರು ಮತ್ತು ಅವರ ಪರಿವಾರದವರು! ಕೆಳಗಡೆಗೆ ಗಂಡಸರು, ವಾದ್ಯಗಳ ಮೇಳದವರು, ವ್ಯವಸ್ಥಾಪಕರು ಇರುತ್ತಿದ್ದರು. ಬಾಗಿಲಲ್ಲಿ ಒಬ್ಬ ಪಠಾಣ ಹೆಬ್ಬುಲಿಯಂತೆ ನಿಂತಿರುತ್ತಿದ್ದನು! ದುಃಖದ ಗಾಳಿಯೆ ಅಲ್ಲಿ ಬೀಸುತ್ತಿರಲಿಲ್ಲ. ಯಾವಾಗಲೂ ಆನಂದ! ಯಾವಾಗಲೂ ಸಂಗೀತ! ಯಾವಾಗಲೂ ನಗೆ!!

ದಿನಗಳೆದಂತೆ ಆ ನಟಿಯ ಮೈತ್ರಿಯು ಮರವಾಗಿ ಹಬ್ಬ ತೊಡಗಿತು. ಇದರಿಂದ ನನ್ನ ಉಳಿದ ಗೆಳತಿಯರು ನನ್ನ ಮೇಲೆ ಜುಗುಪ್ಸೆ ತಾಳಿದರು! ಆ ನಟಿಯ ಹೆಸರು ಕಲ್ಪನಾ ಎಂದು ಇದ್ದಿತು. ಗಂಧರ್ವ ಕನ್ನಿಕೆಯರ ಹಾಗೆ ಅವಳ ಮೈಮಾಟ. ಅವಳಾಡುವ ಮಾತುಗಳೂ ಅಮೃತದ ಹನಿಗಳಾಗಿದ್ದವು. ಅವಳ ಜೊತೆಗೆ ಓಡಾಡುವದೆಂದರೆ, ಮಾತನಾಡುವದೆಂದರೆ ನನಗೊಂದು ಹೆಮ್ಮೆ! ಅಪೂರ್ವ ಸಂತೋಷ!

ಒಂದು ದಿನ ಅವಳು ನನ್ನನ್ನು ತಮ್ಮ ಸಿನಿಮಾ ಕೆಲಸ ನಡೆದಿರುವ ಸ್ಥಳಕ್ಕೆ ಕರೆದುಕೊಂಡು ಹೋಗುವುದಾಗಿ ಹೇಳಿಕಳುಹಿದಳು. ನನ್ನವರನ್ನು ಪುಟ್ಟೆಳನ್ನು ಮರೆಯದೆ ಕರೆತರಲು ತಿಳಿಸಿದಳು. ಆದರೆ ನನ್ನವರಿಗೆ ಬರಲು ಅನುಕೂಲವಿಲ್ಲದ್ದರಿಂದ ನಾನು ಪುಟ್ಟೆಳನ್ನು ಕರೆದುಕೊಂಡು ಹೊರಟೆ.

ರಾಜನು ಪಟ್ಟದ ರಾಣಿಯನ್ನು ಮರೆತು ಪರಸ್ತ್ರೀಯಾದ ನಾಗರಿಕೆಯನ್ನು ಮೋಹಿಸುವ ದೃಶ್ಯ! ಅವನು ಅವಳ ಸಂಗಡ ನಲಿದಾಡುತ್ತಾನೆ! ತೋಟದಲ್ಲಿ ತಿರುಗಾಡುತ್ತಾನೆ! ತನ್ನ ಜೀವನದ ಅಮೃತ ಗಳಿಗೆಗಳನ್ನು ಅನುಭವಿಸುತ್ತಾನೆ! ಕಲ್ಪನಾ ನಾಗರಿಕೆಯ ಪಾತ್ರವಹಿಸಿದ್ದಳು. ಸಿನಿಮಾ ಶೂಟಿಂಗ ಎಂದೂ ನೋಡದ ನಾನು ಅಲ್ಲಿಯ ರೀತಿ ನೀತಿಗಳನ್ನು ಆಗಾಧತೆಯಿಂದ ಬೊಟ್ಟುಕಚ್ಚಿ ನೋಡುತ್ತಿದ್ದೆ.

ನದೀ ತೀರದಿಂದ ತಿರುಗಿ ಬಂದ ಮೇಲೆ ಕಲ್ಪನಾಳ ಕೋಣೆಯಲ್ಲಿ ಹಲವು ನಿಮಿಷ ಕುಳಿತಿದ್ದೆ. ಅವಳು ಉತ್ತಮ ಕಾಫಿ ಮಾಡಿಸುತ್ತೇನೆಂದು

ಹೇಳಿ ನನ್ನನ್ನು ನಿಲ್ಲಿಸಿಕೊಂಡಿದ್ದಳು. ನಾನು ಆ ಮಾತು ಈ ಮಾತು ಆಡುತ್ತ ಅವಳಿಗೆ ಕೇಳಿದೆ- "ನಿಮ್ಮ ಮದುವೆಯಾಗಿದೆಯೇ ?" ಎಂದು.

ಸ್ನಿಗ್ಧ ನೇತ್ರಗಳನ್ನು ಎತ್ತಿ "ಓಹೋ ...... !" ಎಂದು ಹೇಳಿದಳು. ನನ್ನ ಮುಖವನ್ನು ನೋಡಿ "ಏಕೆ? ನಿಮಗೇನು ಸಂಶಯ ?" ಎಂದು ಪ್ರಶ್ನಿಸಿದಳು.

ನನಗೆ ನಾಚಿಕೆ ಬಂದಿತು. ಕಲ್ಪನಾ ಮತ್ತೆ ಕೇಳಿದಳು. "ನೀವು ರಾಜನನ್ನು ಪ್ರೀತಿಸುತ್ತಿದ್ದಿರಿ. ಅವರೇ ನಿಮ್ಮ ........ ?" ಎಂದು ಮೆಲ್ಲಗೆ ಕೇಳಿದೆ.

"ಹೂಂ ! ಹೂಂ ! ಅಲ್ಲ ....... " ಕಲ್ಪನಾ ನಕ್ಕಳು.

"ಹಾಗಾದರೆ ನಿಮಗೆ ಬೇರೆಯವರನ್ನು ಪ್ರೀತಿಸಲು ಹೇಗಾಗುತ್ತದೆ ?" ಆ ದಿನದ ದೃಶ್ಯವನ್ನೆಲ್ಲ ಸ್ಮರಿಸಿಕೊಂಡು ನಾನು ತುಸು ಧೈರ್ಯದಿಂದಲೇ ಮಾತನಾಡಿದೆ.

ಕಲ್ಪನಾ ನನ್ನ ಮಾತಿನ ಅರ್ಥವನ್ನು ಬಹುಬೇಗ ತಿಳಿದುಕೊಂಡಳು. "ಇದು ನಾಟಕ! ಸಿನಿಮಾ !" ಎಂದು ಹೇಳಿ ಮುಗುಳುನಗೆ ಬೀರಿದಳು. "ನಿಮಗೆ ನಿಜವಾಗಿಯೂ ನಾನು ಅವರನ್ನು ಪ್ರೀತಿಸುವೆನೆಂದು ಅನಿಸಿತೆ ? ಅ್ಹ !"

"ಹೂಂ ! ನನಗೆ ಹಾಗೆಯೇ ಅನಿಸಿತು ?"

"ನನ್ನ ಕಲ್ಪನಾ ರಾಜ್ಯ ನಿಮಗೆ ಸತ್ಯವಾಯಿತು ! ಅಲ್ಲವೆ ? ನಟನೆಯಲ್ಲಿ ಎಷ್ಟು ಮಹತ್ವವಿದೆ ! ........ ನೋಡಿ ...... ?"

"ನಿಜವಾದ ಪ್ರೇಮವಿರದ ಹೊರತು ನಿಮಗೆ ಹಾಗೆ ನಟನೆ ಮಾಡಲು ಸಾಧ್ಯವೆ ?"

"ಅದರಲ್ಲೇನು? ಅದೊಂದು ಕಲೆ! ಅದ್ಭುತ ಕಲೆ!! ನನಗೂ ಗೊತ್ತಿದೆ. ಜನರು ನಮ್ಮ ಬಗ್ಗೆ ಏನಾದರೂ ತಪ್ಪು ಕಲ್ಪನೆ ಮಾಡಿಕೊಳ್ಳುತ್ತಾರೆ. ಏನಾದರೂ ಹೆಸರು ಇಡುತ್ತಾರೆ. ಆದರೆ ನಮ್ಮ ಮನಸ್ಸು ಶುದ್ಧವಿದ್ದರೆ ಏನೂ ಆಗುವುದು ಸಾಧ್ಯವಿಲ್ಲ. ನೋಡಿ, ನಾನು ಕಾಲೇಜಿನಲ್ಲಿ ಎರಡು ವರ್ಷ

ಕಲಿತಿದ್ದೇನೆ. ನನ್ನವರಿಗೆ ದೊಡ್ಡ ನೌಕರಿ ಮುಂಬೈಯಲ್ಲಿ. ಆದರೂ ಕಲೆಯ ಅಭಿರುಚಿಗಾಗಿ ಈ ವ್ಯವಸಾಯದಲ್ಲಿರುವೆ! ”

ಕಲ್ಪನಾ ನನ್ನೆದುರಿಗೆ ತನ್ನ ಜೀವನದ ಧ್ಯೇಯಗಳನ್ನೆಲ್ಲ ಹೇಳಿದಳು. ಕುಲೀನ ಸ್ತ್ರೀಯರಿಗೆ ಸಿನಿಮಾ ಪ್ರಪಂಚದಲ್ಲಿ ಕೀರ್ತಿಯಿಲ್ಲವೆಂಬ ಮಾತನ್ನು ದೂರ ಸರಿಸಿ ನಾವಿಬ್ಬರೂ ಆ ದಿನ ಕಾಫಿಯನ್ನು ಕುಡಿದೆವು.

ಹಲವು ದಿನಗಳ ನಂತರ—! ಕಲ್ಪನಾ ತನ್ನ ಅಲ್ಬಮ್ ತೆರೆದು ಹಲವು ಫೋಟೋಗಳನ್ನು ತೋರಿಸುತ್ತಿದ್ದಳು ಆವಳು ಹಿಂದೆ ಅನೇಕ ಚಿತ್ರಗಳಲ್ಲಿ ಪಾತ್ರವಹಿಸಿದ ಸುಂದರ ಭಾವಚಿತ್ರಗಳು ಅಲ್ಲಿದ್ದುವು.

“ ಹಾಗಾದರೆ ನೀವು ಮೊದಲಿನಿಂದಲೂ ನಟಿಯಾಗಿರುವಿರಿ? ” ಎಂದು ನಾನು ಚಿತ್ರಗಳನ್ನು ನೋಡುತ್ತ ಕೇಳಿದೆ.

“ ಅಹುದು. ಈಗ ದಿಗ್ದರ್ಶಕರಾಗಿರುವ ಶ್ಯಾಮಸುಂದರ ಅವರೇ ನನ್ನನ್ನು ಮುಂದೆ ತಂದರು. ನಾನು ಹದಿನೈದು ವರುಷದವಳಿದ್ದಾಗಿನಿಂದಲೇ ಈ ಕ್ಷೇತ್ರದಲ್ಲಿ ಕಾಲಿಟ್ಟಿರುವೆ. ಈ ಕೆಲಸ ಮಾಡುತ್ತಲೇ ನಾನು ಕಾಲೇಜ ಶಿಕ್ಷಣ ಪಡೆದೆ ”

“ ಈ ಚಿತ್ರದಲ್ಲಿ ನಿಮ್ಮ ದಿಗ್ದರ್ಶಕರ ಸಂಗಡ ಬೇರೆಯವರು ಇದ್ದಂತೆ ಕಾಣುವುದು ? ”

“ ಇವಳೇ! ರೂಪಾ !! ಮೊನ್ನೆ ನೀವು ನೋಡಿದಿರಲ್ಲ? ಪಟ್ಟದರಾಣಿ ಆದವಳು ಇವಳೆ ! ”

ನನಗೆ ಆಶ್ಚರ್ಯವಾಯಿತು. “ಅವಳು ಕಪ್ಪಾಗಿ, ಗಿಡ್ಡಾಗಿ ಇರು ವಳಲ್ಲ! ಇಲ್ಲಿ ಎಷ್ಟು ಸುಂದರ ಕಾಣುತ್ತಾಳೆ! ”

“ ಇದೆಲ್ಲ ಫೋಟೋಗ್ರಾಫರರ ಜಾಣತನ !! ನಿಮ್ಮನ್ನು ಮನಸಿಕೆಯಂತೆ ಚಿತ್ರಿಸಬೇಕಾಗಿದ್ದರೆ ಹೇಳಿ, ಚಿತ್ರಿಸಿ ತೋರಿಸುತ್ತಾರೆ!.... ಸಿನಿಮಾ ನೋಡಿದ ಜನರ ಕಲ್ಪನೆ ರೂಪಾದೇವಿಯ ರೂಪ ಬಹಳ ಅಪರೂಪವೆಂದು!... ಮೊನ್ನೆ

ಅವಳು ಹೈದರಾಬಾದಿಗೆ ಹೋದಾಗ ಒಂದು ಅಂಗಡಿಯಲ್ಲಿದ್ದಳು.... ಜನ ಜಂಗುಳಿ ಜಾತ್ರೆಯಂತೆ ನೆರೆಯಿತು ಅವಳನ್ನು ನೋಡಲು!... ತಾವು ಹುಚ್ಚ ರೆಂಬುದು ಜನರಿಗೆ ಹಿಂದುಗಡೆ ಗೊತ್ತಾಯಿತು! ”

ನಾವಿಬ್ಬರೂ ಕೂಡಿ ಗಹಗಹಿಸಿ ನಕ್ಕೆವು. ಕಲ್ಪನಾ ಹೇಳಿದಳು. “ನೋಡಿ, ರೂಪಾದೇವಿಗೆ ನನ್ನಮೇಲೆ ಬಹಳ ಸಿಟ್ಟು! ಹಲವು ದಿನವಾಯಿತು! ಮುಖ್ಯ ರಾಣಿ ಪಾತ್ರ ಮಾಡುವದಿಲ್ಲವೆನ್ನುತ್ತಾಳೆ.”

“ ಅದೇಕೆ?.... ಒಮ್ಮೆಲೆ ಏನಾಯಿತು? ”

“ ಒಮ್ಮೆಲೆ ಅಲ್ಲ. ಬಹಳ ವರ್ಷಗಳಾದವು! ಶ್ಯಾಮಸುಂದರರು ನನ್ನನ್ನು ಹೆಚ್ಚು ಮೆಚ್ಚುತ್ತಾರೆಂದು ಭ್ರಮೆ! ”

“ ಮುಖ್ಯ ನಾಯಕರು, ದಿಗ್ದರ್ಶಕರು ನಿಮ್ಮನ್ನು ಮೆಚ್ಚಲೇಬೇಕ ಲ್ಲವೇ? ” ನಗುತ್ತ ನಾನು ಕೇಳಿದೆ.

“ ಅವರೇನೂ ಮೆಚ್ಚಬಹುದು! ಆದರೆ....? ”

“ ಸಂಶಯವೇಕೆ? ”

“ ಕಲಾಮಂದಿರದಲ್ಲಿ ಅವರನ್ನು ಪೂಜಿಸುವೆ! ನೀತಿಯ ಮಂದಿರ ದಲ್ಲಿ? ”

“ ಅವರದು ಮದುವೆಯಾಗಿಲ್ಲವೆ? ”

ಬಾಗಿಲಲ್ಲಿ ಸಪ್ಪಳವಾಯಿತು, ಮುಂದೆ ಮಾಡಿದ ಬಾಗಿಲ ತೆರೆಯಿತು.

ಶ್ಯಾಮಸುಂದರರು ಬಂದು ಕಲ್ಪನಾಳ ತೀರ ಹತ್ತಿರವೇ ಕುಳಿತರು. ನಾನು ಎದ್ದುಹೋಗಲು ಹವಣಿಸಿದೆ. ಆದರೆ ಕಲ್ಪನಾ ನನ್ನನ್ನು ಹೊರಗೆ ಬಿಡಲಿಲ್ಲ. ನನಗೇಕೋ ಅಲ್ಲಿ ಕೂಡುವುದು ಉಚಿತವೆನಿಸಲಿಲ್ಲ. ಸ್ವಲ್ಪ ಹೊತ್ತಿನ ನಂತರ ಒಂದು ಕೆಲಸದ ನೆವ ಮಾಡಿಕೊಂಡು ಹೊರಗೆ ಬಂದೆ. ‘ಪುಟ್ಟಳನ್ನು ಇಲ್ಲಿಗೆ ಕಳಿಸಿ’ ಎಂದು ಕಲ್ಪನಾ ಪುನಃ ಪುನಃ ಹೇಳಿದಳು.

ಪುಟ್ಟಳಿಗೆ ನಾನು ಹೇಳಲು ಕಾರಣವೇ ಇರಲಿಲ್ಲ. ಕಲ್ಪನಾ ಅಂದರೆ ಅವಳಿಗೆ ಜೀವ. ತಾನಾಗಿಯೆ ಓಡಿ ಓಡಿ ಹೋಗುತ್ತಿದ್ದಳು. ತಿರುಗಿ ಮನೆಗೆ

ಬರುವಾಗ ಅವಳು ಬರಿಗೈಯಿಂದ ಬರುತ್ತಲೇ ಇರಲಿಲ್ಲ. ಅವಳ ಕೈತುಂಬ ಏನಾದರೂ ತಿನ್ನುವ ಪದಾರ್ಥಗಳು ಇರುತ್ತಿದ್ದವು.

ಪುಟ್ಟಳಮೇಲಿನ ಅವಳ ಮಮತೆ ನೋಡಿ ನಾನು ಪುಟ್ಟಳ ಹುಟ್ಟು ಹಬ್ಬಕ್ಕೆ ಆಮಂತ್ರಣವನ್ನು ಕೊಟ್ಟೆ. ಆದಿನ ಸಮೀಚೀನವಾದ ಊಟವನ್ನು ತಯಾರಿಸಿದೆ. ಉಡುಗೊರೆಯಾಗಿ ಅನೇಕ ಬಟ್ಟೆಗಳು, ಆಟಿಗೆಗಳು ಬಂದವು. ಆದರೆ ಕಲ್ಪನಾ ಮಾತ್ರ ಬರಲಿಲ್ಲ. ಕೆಲಸದ ಮೂಲಕ ಬರುವದಾಗುವದಿಲ್ಲ ವೆಂದು ತಿಳಿಸಿದ್ದಳು.

ಆ ದಿನ ಸಂಜೆ ನಾನೇ ಕಲ್ಪನಾಳನ್ನು ಭೆಟ್ಟಿಯಾಗಲು ಹೋದೆ. ಅವಳು ಅಟ್ಟದ ಮೇಲೆ ಹೊರಬದಿಯಲ್ಲಿ ಹಲವು ಗುಲಾಬಿ ಹೂಗಳನ್ನು ಹಿಡಿದುಕೊಂಡು ನಿಂತಿದ್ದಳು. ನನ್ನನ್ನು ನೋಡಿದ ಕೂಡಲೇ ಕೈಮಾಡಿ ಕೂಗಿದಳು.

ನಾನು ಅಟ್ಟವನ್ನು ಏರಿ ಅವಳ ಕೋಣೆಗೆ ಹೋದೆ. ಎದುರಿಗಿರುವ ಸಂಗೀತ ಕಚೇರಿ ಜೋರಾಗಿ ಸಾಗಿತ್ತು. ಜನರೂ ಗುಂಪಾಗಿ ಕುಳಿತಿದ್ದರು. ನಾನು ಅತ್ತಕಡೆಗೆ ವಿಶೇಷ ಲಕ್ಷ್ಯಗೊಡದೆ ಕಲ್ಪನಾಳ ಜೊತೆಗೆ ಮಾತನಾ ಡುತ್ತ ಒಳಗೆ ಹೋದೆ.

ಕಲ್ಪನಾ ನಮ್ಮ ಮನೆಗೆ ಬರದೆ ಇದ್ದುದಕ್ಕೆ ಸಬಲ ಕಾರಣಗಳನ್ನು ಕೊಟ್ಟಳು. "ನಿಮಗೆ ಕೆಲಸದ ಭಾರ ಬಹಳವಾಗಿದೆಯೆಂದು ನನಗೆ ಗೊತ್ತು. ತಗೊಳ್ಳಿ, ಅದಕ್ಕೇ ಇಲ್ಲಿಗೇ ಎಲ್ಲ ತಂದಿರುವೆ" ಹೀಗೆಂದು ನಾನು ತಂದಿದ್ದ ಫಲಾಹಾರದ ಡಬ್ಬಿಯನ್ನು ಅವಳೆದುರಿಗೆ ಇಟ್ಟೆ. ಕಲ್ಪನಾ ಅತಿ ಸಂತೋಷ ದಿಂದ ಅವನ್ನೆಲ್ಲ ಸ್ವೀಕರಿಸಿದಳು.

"ನಿಮ್ಮ ಸಂಸಾರ ನೋಡಿ ನನಗೆ ಆನಂದವಾಗುತ್ತಿದೆ." ಎಂದಳು ಕಲ್ಪನಾ. "ನಿಮ್ಮ ತಂದೆತಾಯಿಗಳು ಎಲ್ಲಿ ಇರುವರು?"

"ಇದ್ದಾರೆ! ತೌರುಮನೆಯಲ್ಲಿ... ಯಾವಾಗಾದರೊಮ್ಮೆ ಹೋಗಿ ಭೆಟ್ಟಿ ಯಾಗಿ ಬರುವೆ!"

"ನೋಡಿರಿ. ನನಗೆ ತಂದೆತಾಯಿಗಳ ಭೆಟ್ಟಿಯೇ ಇಲ್ಲ."

"ಅಂದರೆ.?"

"ಸಂಶಯ ಪಟ್ಟುಕೊಳ್ಳಬೇಡಿರಿ. ತೀರಿಕೊಂಡಿಲ್ಲ. .ಇದ್ದಾರೆ! ಆದರೆ ಅವರು ನನ್ನನ್ನು ಹೊರಗೆ ಹಾಕಿಬಿಟ್ಟಿದ್ದಾರೆ."

"ಇದೇನು ಹೇಳುವಿರಿ?"

"ಅಹುದು! ನನ್ನ ನಾಟಕ ನೋಡಿ ಬೇಸತ್ತಿದ್ದಾರೆ."

"ನಿಮಗೆ ಹೇಗೆ ಇನ್ನೂ ಬೇಸರಿಕೆ ಬಂದಿಲ್ಲ?"

"ನಾನು ನಾಚು, ನಾಟಕ ಎಂದು ಹುಚ್ಚಳಂತೆ ಓಡಾಡಿದೆ. ಸಿನಿಮಾ ದಲ್ಲಿ ಸೇರಿದಾಗಿನಿಂದ ಮತ್ತಿಷ್ಟು ಕೋಪಗೊಂಡರು. ಮದುವೆ ಮಾಡಿದರೆ ಈ ಹುಚ್ಚು ಬಿಡುತ್ತದೇನೋ ಎಂದು ನೋಡಿದರು. ಯಾವದೂ ಸಾಧ್ಯವಾಗ ಲಿಲ್ಲ. ಈಗ ನನ್ನ ಕೈಬಿಟ್ಟಿದ್ದಾರೆ. ಮನೆಗೆ ಬಂದರೆ ತಮ್ಮ ಹೆಸರು ಕೆಡುವ ದೆಂದು ಮನೆಗೆ ಬರಬೇಡವೆಂದು ಹೇಳಿದ್ದಾರೆ. ಅಲ್ಲ, ನಿಮ್ಮ ಹೆಸರೂ ಈಗ ಊರಲ್ಲಿ ಕೆಟ್ಟಿಲ್ಲವೆ? ನನ್ನ ಜೊತೆಗೆ ಬರುವಿರಿ ಅಂದಮೇಲೆ?"

ಕಲ್ಪನಾ ಕೇಳಿದ ಪ್ರಶ್ನೆಯ ಬಗ್ಗೆ ವಿಚಾರಿಸಬೇಕಾಯಿತು. ಆಗ ವೇಶ್ಯಾಸ್ತ್ರೀಯರಷ್ಟೆ ಇಂಥ ವ್ಯವಸಾಯದಲ್ಲಿ ಇರಬೇಕೆಂದು ಸಮಾಜದ ಮತ. ಕುಲೀನ ಸ್ತ್ರೀಯಳಾದ ಕಲ್ಪನಾ ಹೇಗೆ ಆ ಜಗತ್ತಿನಲ್ಲಿ ಇರಬಲ್ಲಳು?

ನಾನು ಸುಮ್ಮನೇ ಇದ್ದೆ.

"ನನ್ನ ಪ್ರಶ್ನೆ ನಿಮಗೆ ವಿಚಿತ್ರವಾಗಿ ಕಂಡಿರಬೇಕು. ನಮ್ಮ ನೀತಿ ಕೆಡಿಸಿ ಕೊಳ್ಳದ ಹೊರತು ಸ್ವಚ್ಛವಾಗಿ ಇರಲು ನಮಗೆ ಬರುವಂತಿಲ್ಲ...."

"ಹಲವು ದಿನಗಳ ಹಿಂದೆ ನೀವೇ ಹೇಳಿದ್ದಿರಿ. ಮನಸ್ಸು ಶುದ್ಧವಿದ್ದರೆ ಏನೂ ಹೆದರಿಕೆಯಿಲ್ಲವೆಂದು?"

"ಅಹುದು, ನನಗೆ ಹಾಗೆ ಅನಿಸಿದೆ. ಆ ದೃಷ್ಟಿಯಿಂದಲೆ ನಾನು ಇಷ್ಟು ವರ್ಷ ಕೆಲಸ ಮಾಡಿದ್ದೇನೆ. ಮೊನ್ನೆ ರಾಜರಾದ ಶ್ಯಾಮಸುಂದರ ಅವರನ್ನು

ಅತ್ಯಂತ ಪ್ರೀತಿಸುವ ದೃಶ್ಯವಿತ್ತು. ನನ್ನ ಕಲ್ಪನೆ ಮೀರಿ ನಾನು ಕೆಲಸವೂ ಡಿದೆ. ಆದರೆ....?"

" ಆದರೆ...??"

" ಆದರೆ ಏನು? ಶ್ಯಾಮಸುಂದರ ಅವರು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದಾರೆ. ನನ್ನನ್ನು ಬಿಟ್ಟಿರಲು ಅವರಿಗೆ ಮನವಿಲ್ಲ"

ಹೊರಗೆ ಜೋಳ್ಳನೆ ನಕ್ಕ ಧ್ವನಿ ಕೇಳಿಸಿತು. ಮತ್ತು ವಾದ್ಯಗಳು ಹಾಡುಗಳು ಆರಂಭವಾದವು.

ಕಲ್ಪನಾ ಹೇಳಿದಳು " ರೂಪಕಳ ಧ್ವನಿ ಎಷ್ಟು ಮಧುರವಾಗಿದೆ ಕೇಳಿ. ಈ ಧ್ವನಿಗಾಗಿ ಶ್ಯಾಮಸುಂದರ ನಾಗರಹಾವು ಆಗಿದ್ದಾರೆ. ಧ್ವನಿಗಾಗಿ ಅವಳು...."

"ರೂಪಕಳ್ಳಾಗಿ ನೀವು!" ಎಂದು ನಾನು ವಾಕ್ಯವನ್ನು ಪೂರ್ತಿಗೊಳಿಸಿದೆ.

ಕಲ್ಪನಾ ವಿಚಿತ್ರ ನಗೆ ನಕ್ಕಳು! ಅದರ ಸಂಗಡ ನಿಟ್ಟುಸಿರನ್ನು ಬಿಟ್ಟಳು! "ನೋಡಿರಿ ನೀವೂ ಕಲಿತವರಿರುವಿರಿ. ಈ ಗುಲಾಬಿ ಹೂವಿನ ಸುತ್ತ ಎಷ್ಟು ಮುಳ್ಳುಗಳಿವೆ. ಏಕೆ ಹೇಳಿರಿ ನೋಡೋಣ."

ನಾನು ಶಾಲೆಬಿಟ್ಟಮೇಲೆ ಶಿಕ್ಷಕರು ಕೇಳುವ ಇಂಥ ಪ್ರಶ್ನೆಗಳು ನನ್ನ ಕಿವಿಯ ಮೇಲೆ ಬಿದ್ದಿರಲಿಲ್ಲ. ನಾನು ಮುಗುಳುನಗೆ ನಗುತ್ತಲೆ ಹೇಳಿದೆ. "ನೀವು ಗುಲಾಬಿ ಹೂ! ನಿಮ್ಮ ಹತ್ತಿರ ಯಾರೂ ಬರಬಾರದೆಂದು ಆ ಮುಳ್ಳುಗಳು !"

ಉತ್ತರ ಹೇಳಿ ಮತ್ತೊಮ್ಮೆ ನಕ್ಕೆ.

"ನಗುವ ಕಾರಣವಿಲ್ಲ. ಇದೇನು ಕಲ್ಪನೆಯ ಉತ್ತರವಲ್ಲ!" ಕಲ್ಪನಾ ಒಮ್ಮೆ ನಿಡಿದಾದ ಉಸಿರುಬಿಟ್ಟಳು. ಮತ್ತೊಮ್ಮೆ ಗಂಭೀರವಾಗಿ ಈ ಮಾತು ಹೇಳಿದಳು. ಇದರಿಂದ ಯಾವದೋ ಗೂಢಾರ್ಥವಿದೆಯೆಂದು ಮಾತ್ರ ನನಗೆ ಅನಿಸಿತು.

"ಹೂವಿದ್ದಲ್ಲಿಗುಂಗಿಗಳು ಬರುವವೆ! ಶ್ಯಾಮಸುಂದರರು ಅದ್ಭುತ ಕಲಾ ಪ್ರೇಮಿಗಳು. ಅವರು ಹೀಗಾಗುವರೆಂದು ನನಗೆ ಅನಿಸಿರಲಿಲ್ಲ. ಏನು ಮಾಡ ಬೇಕು?"

ಸುಂದರವಾದ ಚಂದ್ರಕಳೆಯ ಮೇಲೆ ಕಪ್ಪು ಮೋಡಗಳು ಓಡಾಡಿ ದಂತೆ ಕಲ್ಪನಾಳ ಮುಖ ಮುದ್ರೆ ನೋಡಿದ ಕೂಡಲೆ ಅನಿಸಿತು!

ನಾವಿಬ್ಬರೂ ಕೂಡಿ ಕೆಳಗಿಳಿದು ಬರುವಾಗ ಇನ್ನೂ ರೂಪಾದೇವಿಯ ಸಂಗೀತದ ಧ್ವನಿ ಕೇಳಿಸುತ್ತಿತ್ತು. "ರೂಪಾಳ ನಿರ್ಧಾರ ಏನಾಯಿತು?" ಎಂದು ಕೇಳಿದೆ.

"ನಾನು ಏನು ಹೇಳಲಿ? ಅಡಕೊತ್ತಿನಲ್ಲಿ ಸಿಕ್ಕಿರುವೆ. ಹಲವು ವರ್ಷ ಗಳ ಹಿಂದೆ ಅವಳ ಸಂಗೀತಕ್ಕೆ ಮರುಳಾಗಿ ಶ್ಯಾಮಸುಂದರರು ಅವಳಿಗೆ ನಟಿಯ ಕಾರ್ಯವನ್ನು ಕೊಟ್ಟರು. ಈ ಕಲೆಯಲ್ಲಿ ಪ್ರವೀಣಳನ್ನಾಗಿ ಮಾಡಿ ದರು. ಮುಂದೆ ಪ್ರಣಯ ಹೆಮ್ಮರವಾಗಿ ಬೆಳೆಯಿತು. ಆಗ ರೂಪಳು..."

"ರೂಪಳ ಮದುವೆಯಾಗಿದೆ ಏನು?...."

"ಅವಳು ಯಾರು ಎಂದು ಮಾಡಿರುವಿರಿ?" ಕಲ್ಪನಾ ಅಚ್ಚರಿಯನ್ನು ವ್ಯಕ್ತಪಡಿಸಿ ಕೇಳಿದಳು. "ಲಗ್ನವಾದಂತೆಯೇ ಇದ್ದಾಳೆ !"

"ಅಂತೂ ನೀವೀಗ ಶೂಟಿಂಗ ನಡೆಯಿಸಿರುವ ಸಿನಿಮಾ ನಿಜ ಜೀವ ನದ್ದೇ ಆಗಿದೆ!"

"ಅಹುದು! ನಿಜವಾಗಿಯೂ..."

ನಾವು ಮೆಟ್ಟಲುಗಳನ್ನು ಇಳಿದು ಗೇಟಿನ ಬಳಿ ಬಂದೆವು. "ನಿಮ್ಮನ್ನೂ ಪುಟ್ಟಳನ್ನು ನೋಡಿದಾಗಿನಿಂದ ನನಗೇಕೋ ಸಂಕಟವಾಗುತ್ತಿದೆ. ಬಹಳ ಸಂಕಟವಾಗುತ್ತಿದೆ! ಏನು ಮಾಡಲಿ?" ಎಂದು ಕಲ್ಪನಾ ಕೇಳಿದಳು.

"ಹೀಗೇಕೆ ನೀವು ಈ ದಿನ ಏನು ಮಾಡಲಿ? ಏನು ಮಾಡಲಿ?" ಎಂದು ಕೇಳುವಿರಿ? ಅಂಥ ಪ್ರಸಂಗ ಏನು ಬಂದಿದೆ?"

"ಇದೆ! ನಾವೇನು ಇಲ್ಲಿ ಬಹಳ ದಿನ ನಿಲ್ಲುವದಿಲ್ಲ. ಹೋಗುವ ಮುಂದೆ ಭೆಟ್ಟಿಯಾಗಿಯೆ ಹೋಗುತ್ತೇನೆ"

ನಾನು ಕಲ್ಪನಾಳನ್ನು ಅಗಲುವ ಹೊತ್ತಿಗೆ ಅವಳು ಈ ಮಾತುಗಳನ್ನು ಹೇಳಿದ್ದಳು. ಸಿನಿಮಾದಲ್ಲಿರುವ ನಟನಟಿಯರಿಗೆ ಯಾವಾಗಲೂ ಸಂತೋಷ, ಸುಖ ಇರುವದೆಂದು ತಿಳಿದಿದ್ದೆ. ಆದರೆ ಆ ದಿನ ಕಲ್ಪನಾಳ ಸಂಗಡ ಮಾತ ನಾಡಿದಂದಿನಿಂದ ಅವರಿಗೂ ದುಃಖವಿದೆ, ಅವರಿಗೂ ಧ್ಯೇಯವಿದೆ, ಅವರಿಗೂ ಸಂಸಾರವಿದೆ ಎಂಬುದು ನನಗೆ ಮನವರಿಕೆಯಾಯಿತು.

ಇದಾದ ಹಲವು ದಿನಗಳಲ್ಲಿಯೆ ಒಂದು ದಿನ ಮಧ್ಯಾಹ್ನ ನಮ್ಮ ಮನೆ ಯೆದುರಿಗೆ ಮೋಟಾರು ನಿಂತ ಸಪ್ಪಳವಾಯಿತು. ಬಿಸಿಲು ದಿನಗಳಿದ್ದುದರಿಂದ ನನ್ನ ಮನೆಗೆಲಸ ಮುಗಿಸಿ ನಾನು ಆದೇ ಆಗ ಅಡ್ಡಾಗಿದ್ದೆ. ಮೋಟಾರ ಸಪ್ಪಳ ಕೇಳಿ ಎದ್ದು ಕುಳಿತೆ. ಕೂಡಲೇ ಬಾಗಿಲು ಬಡಿದ ಸಪ್ಪಳವಾಯಿತು. ಬಾಗಿಲು ತೆರೆದು ನೋಡುತ್ತೇನೆ, ಕಲ್ಪನಾ !

" ಇದೇನು ಈ ಹೊತ್ತಿನಲ್ಲಿ? "

ಕಲ್ಪನಾ ಲಗುಬಗೆಯಿಂದ ಒಳಗೆ ಬಂದಳು. "ಪುಟ್ಟು ಎಲ್ಲಿ? " ಎಂದು ಕೇಳಿದಳು.

ಪುಟ್ಟು ಆದೇ ಆಗ ಮಲಗಿದ್ದಳು. ಕಲ್ಪನಾ ಅಲ್ಲಿಗೇ ಹೋಗಿ ಲಟ ಲಟನೆ ಮುದ್ದುಕೊಟ್ಟಳು. " ನಾನು ಬರುತ್ತೇನೆ ನನ್ನ ನೆನಪಿರಲಿ " ಎಂದು ಹೇಳಿ ತನ್ನ ಬೂಟು ಹಾಕತೊಡಗಿದಳು.

ಅವಳ ವರ್ತನೆ ವಿಚಿತ್ರವೆನಿಸಿತು. " ಇದೇನು ಇಷ್ಟು ಗಡಿಬಿಡಿ; ನಿಲ್ಲಿರಿ. ಚಹ ಮಾಡಿಕೊಡುತ್ತೇನೆ."

" ಇಲ್ಲ ಈಗ ವೇಳೆಯಿಲ್ಲ."

ಮೋಟಾರ ಹಾರ್ನ ಬಾರಿಸಿತು !

" ಬರುತ್ತೇನೆ. ನಮಸ್ಕಾರ ! " ಕಲ್ಪನಾ ಹೇಳಿದಳು.

ನಾನು ಎಷ್ಟು ಜುಲುಮೆಮಾಡಿದರೂ ಕೇಳಲಿಲ್ಲ. "ನಾನು ಊರಿಗೆ ಹೋಗಬೇಕಾಗಿದೆ ನೋಡಿರಿ. ನಿಮ್ಮ ಮುಂದೆ ಇಷ್ಟೇ ಹೇಳುವೆ. ಶ್ಯಾಮ ಸುಂದರರನ್ನೂ ರೂಪಳನ್ನೂ ಅವರವರ ಪಾಲಿಗೆ ಬಿಟ್ಟುಬಿಟ್ಟಿದ್ದೇನೆ"

"ಅಂದರೆ ಕೊನೆಗೆ ಅವರ ಸಂಗಡ ಜಗಳವಾಡಿದಿರಾ ?"

"ಇಲ್ಲ ಮನೆಯಲ್ಲಿ ನಮ್ಮವರಿಗೆ ಜ್ವರವೆಂದು ಹೇಳಿ ಹೊರಟಿರುವೆ."

ಮೋಟಾರ ಹಾರ್ನ ಮತ್ತೆ ಕೇಳಿಸಿತು.

ನಗುತ್ತ, ನಮಸ್ಕಾರಮಾಡುತ್ತ ಕಲ್ಪನಾ ಮೋಟಾರಿನಲ್ಲಿ ಕುಳಿತಳು. ಮೋಟಾರು ಓಡಿತು! ಅದರ ಹಿಂದಿನ ಧೂಳಿ ಅವಳ ಆಕೃತಿಯನ್ನು ಮುಸುಗಿ ಬಿಟ್ಟಿತು !

ಅವಳು ನನ್ನ ಸುಖದ ಭಾಗವನ್ನು ಕಿತ್ತುಕೊಂಡು ಮೋಟಾರಿನಲ್ಲಿಟ್ಟು ಕೊಂಡು ಹೋದಂತೆ ನನಗೆ ಬಹಳ ದಿನ ಅನಿಸಿತು.

‡ ‡ ‡ ‡

ಎಷ್ಟೋ ತಿಂಗಳುಗಳ ನಂತರ! ನಾನು ಪತ್ರಿಕೆಯನ್ನು ಓದುತ್ತಿದ್ದೆ! ಅದರಲ್ಲಿ ಒಂದು ವಿಶೇಷ ಸುದ್ದಿ ನನ್ನನ್ನು ಆಕರ್ಷಿಸಿತು. "ಸುಪ್ರಸಿದ್ಧ ಸಿನಿಮಾ ನಟಿ ಕಲ್ಪನಾದೇವಿಯ ಖಟ್ಲೆ! ಬಾಂಡು ತಪ್ಪಿಸಿದ್ದಕ್ಕಾಗಿ ಹತ್ತು ಸಾವಿರ ರೂಪಾಯಿಗಳನ್ನು ದಿಗ್ದರ್ಶಕರಾದ ಶ್ಯಾಮಸುಂದರ ಅವರಿಗೆ ಕೊಡ ಬೇಕಾಯಿತು ........"

ಅದೇ ದಿನ ನನ್ನ ಟೇಬಲ್ಲಿನ ಮೇಲೆ ಕಲ್ಪನಾಳ ಪತ್ರವೊಂದು ಇತ್ತು. ತನಗೆ ಒಂದು ಮಗು ಹುಟ್ಟಿರುವುದಾಗಿಯೂ ಅದಕ್ಕೆ ಪುಟ್ಟಾ ಎಂದು ಕರೆ ಯುತ್ತಿರುವುದಾಗಿಯೂ ಬರೆದಿದ್ದಳು !

# ಸ್ನೇಹಲತಾ.

೧೫—೯—೧೯.....

ಈಗ ಮನಸ್ಸಿಗೆ ನೆಮ್ಮದಿಯೆನಿಸುತ್ತಿದೆ. ಇಂದಿನಿಂದ ಮತ್ತೆ ನನ್ನ ದಿನಚರಿ ಬರೆಯುವ ಕಾರ್ಯಕ್ರಮವನ್ನು ಆರಂಭಿಸಬೇಕು. ದಿನಚರಿಯೆ ನನ್ನ ಸಹಧರ್ಮಿಣಿ; ನನ್ನ ಸಹ–ಸಂಚಾರಿ; ಅದೆ ನನಗೆ ಹೆಚ್ಚು ಸಂತಸ ಕೊಡುವುದು.

ಈ ಹದಿನೈದು ದಿನ ನನ್ನ ಮನಸ್ಸು ಬಿರುಗಾಳಿಯಲ್ಲಿ ಸಮುದ್ರವಾಗಿತ್ತು. ನನ್ನ ಆತ್ಮ ಸಂಯಮನದಿಂದ ಈಗ ಶಾಂತತೆ ಪಡೆದಿರುವೆ. ಈ ಶಾಂತ ಮನಸ್ಸು ಚಿರವಾಗಿರಲೆಂದು ಹಾರೈಸುವೆ.

ನನಗೆ ಅತ್ಯಂತ ಶಾಂತತೆಯನ್ನು ತಂದುಕೊಟ್ಟವರು ಆನಂದರಾಯರು. ಅವರು ಬಹಳ ಸರಳ ಮನುಷ್ಯರು. ತಮ್ಮ ರೀತಿ ನೀತಿಗಳಲ್ಲಿ ಎಷ್ಟು ನಯವಾಗಿದ್ದಾರೆ! ನಿಜವಾಗಿಯೂ ಎಲ್ಲರಿಗೂ ಆನಂದ ಕೊಡುವ ಸ್ವಭಾವ ಆನಂದರಾಯರದು!

ರಾತ್ರಿ ೧೨ ಘಂಟೆ! ಹೂಂ, ಇದೇ ಹೊತ್ತು! ಮಳೆ ಧೋ ಧೋ ಹೊಡೆಯುತ್ತಿತ್ತು! ಸ್ನೇಹಲತಾ, ಇಂಥ ಹೊತ್ತಿನಲ್ಲಿ ನೀನು ನನ್ನ ಕೈಬಿಟ್ಟು ಹೋದೆಯಲ್ಲಾ! ನೀನು ಹಾಸಿಗೆಯಲ್ಲಿ ಹಾಗೆಯೇ ಮಲಗಿದ್ದರೂ, ಬೇಕಾದಷ್ಟು ದಿನ ಇದ್ದರೂ ನಿನ್ನ ಸೇವೆಮಾಡಲು ನಾನು ಸಿದ್ಧನಿದ್ದೆ. ಈಗ ಹದಿನೈದು ದಿನ ನಾನೊಬ್ಬನೇ ಕಳೆಯಬೇಕಾದರೆ ನನಗೆ ಎಷ್ಟೋ ಯುಗಗಳನ್ನು ಕಳೆದಂತಾಗಿದೆ. ರಾತ್ರಿ ನಿದ್ದೆಯೇ ಇಲ್ಲ. ನನ್ನ ನೆನಪು ನಿನಗೆ ಆಗುತ್ತದೆಯೇ? ನಾನು ಜೀವಂತವಿದ್ದು ಎಷ್ಟು ಕಷ್ಟಕ್ಕೀಡಾಗಿದ್ದೇನೆ ಬಲ್ಲೆಯಾ? "ಚಿತಾ ದಹತಿ ನಿರ್ಜೀವಂ, ಚಿಂತಾ ದಹತಿ ಜೀವಿತಂ" ಎಂಬುದು ಸತ್ಯ. ಏನು ಹೇಳಲಿ ಸ್ನೇಹಲತಾ?

ನೋಡು ಸ್ನೇಹಲತಾ ! ನಿನ್ನ ಸ್ನೇಹದ ಲತೆ ನನ್ನ ದೇಹವನ್ನು ಸುತ್ತಿಕೊಂಡಿದೆ, ಅದರಿಂದಲೇ ನನ್ನ ಜೀವನ. ನಿನ್ನನ್ನು ಮರೆಯಲು ಸಾಧ್ಯವೇ ಇಲ್ಲ. ನೀನು ಆಗ ಅಂದದ್ದು ಈಗ ಮತ್ತೆ ನೆನಪಾಗುತ್ತದೆ. ನಿನಗೆ ಜಡ್ಡು ಬಹಳ ಆದಾಗ "ನಾನು ಸತ್ತಮೇಲೂ ಪ್ರೀತಿ ಕಡಿಮೆಯಾಗುವುದಿಲ್ಲವೆ ? " ಎಂದು ಕೇಳಿದ್ದಿ. "ಛೀ! ಇದೆಂಥ ಮಾತು!" ಎಂದು ಹೇಳಿದ್ದೆ. "ಮತ್ತೊಬ್ಬಳನ್ನು ಲಗ್ನವಾಗುವುದಿಲ್ಲವೇ ? " ಎಂದು ಕೇಳಿದ್ದೆ. "ಇಂಥ ಮಾತುಗಳನ್ನು ಆಡಬೇಡ, ಸುಮ್ಮನೆ ಮಲಗಿಕೋ " ಎಂದು ಸಮಾಧಾನ ಪಡಿಸಿದ್ದೆ. ದೈವ ಎಷ್ಟು ವಿಚಿತ್ರ! ಯಾವದು ಆಗಬಾರದೆಂದು ಬಯಸಿದ್ದೆನೋ ಅದು ಆಗಿ ಹೋಯಿತು.

ಸ್ನೇಹಲತಾ, ನಿನ್ನ ಕೊರಳಾಣೆ ಮಾಡುತ್ತೇನೆ. ನಿನ್ನನ್ನೇ ವರಿಸಿದ್ದೇನೆ. ಕೊನೆಯವರೆಗೂ ಹಾಗೆಯೇ ಬಾಳುವೆ. "ನವೋದಯ" ಪತ್ರಿಕೆಯಲ್ಲಿ ಬಂದಿದೆ ನೀನು ಓದಿರುವೆಯಾ ?

ನವೋದಯ ದಿನಪತ್ರಿಕೆ; ೧೪—೯—೬೯, ಮೊದಲನೆಯ ಪುಟ, ನಾಲ್ಕನೆಯ ಕಾಲಮ್ಮಿನಲ್ಲಿ "ನನ್ನ ಪ್ರಿಯಪತ್ನಿ ಸ್ನೇಹಲತಾ ನನ್ನನ್ನು ಅಗಲಿದ್ದರಿಂದ ನನ್ನ ಸ್ನೇಹಲತೆಯು ಕುಡಿಯನ್ನೆ ಚಿವುಟಿದಂತಾಗಿದೆ. ಅವಳ ಪ್ರೀತಿ ನನ್ನ ಹೃದಯದಲ್ಲಿ ಚಿರಸ್ಥಾಯಿಯಾಗಿದೆ. ನನ್ನ ದುಃಖದಲ್ಲಿ ಸಮಭಾಗಿಗಳಾಗಿ ನನ್ನ ಮತ್ತು ಅವಳ ಗೆಳೆಯ-ಗೆಳತಿಯರು ಕಾಗದ ಬರೆದಿದ್ದಾರೆ. ಅವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ."

ಈ ಸುದ್ದಿಯನ್ನು ವಿಶೇಷ "ಬಾರ್ಡರ" ಹಾಕಿಕೊಟ್ಟಿದ್ದಾರೆ. ಈ ದಿನಾಂಕದ ಪತ್ರಿಕೆಯನ್ನು ತೆಗೆದುಕೊಂಡು ಒಳಗೆ ಇಟ್ಟಿದ್ದೇನೆ.

೧೬—೯—೬೯....

"ಆಫೀಸಿನ ಕೆಲಸ ಬಹಳವಾಗಿದೆ ಪತ್ರಿಕಾ ವ್ಯವಸಾಯದಲ್ಲಿ ಕೆಲಸ ಮಾಡುವವರ ಗತಿ ಹೀಗೆಯೇ! " ಹೀಗೆ ನನ್ನ ಮಿತ್ರರು ಹೇಳಿದರು. ನನಗೇನೂ ಹಾಗೆ ಅನಿಸುವದಿಲ್ಲ. ಸ್ನೇಹಲತಾ ಇರುವಾಗ ಹಾಗೆ ಅನಿಸುತ್ತಿತ್ತು. ಈಗ ಆಫೀಸಿನಲ್ಲಿಯೇ ಇನ್ನೂ ಇರಬೇಕು ಎನಿಸುತ್ತದೆ. ರಾತ್ರಿಪಾಳಿ ಬಂದರಂತೂ ಇನ್ನೂ ಉತ್ತಮ. ಹೊತ್ತು ಹೇಗಾದರೂ ಹೋಗುವದು.

ಹಗಲು ಪಾಳಿ ಮುಗಿಸಿಕೊಂಡು ಕೋಣೆಗೆ ಬಂದೆ. ಆನಂದರಾಯರ ಮನೆಯಲ್ಲಿ ಚಹಾಪಾನವಾಯಿತು. ಚಹಾ ಚೆನ್ನಾಗಿತ್ತು. ಚಹಾ ಮಾಡಿದ ವರಾರೆಂದು ಕೇಳಿದಾಗ ರಾಯರು ಮುಗುಳು ನಗೆ ನಕ್ಕರು!

ನಾನು ಹೀಗೆಯೇ ಇಲ್ಲಿ ಎಷ್ಟು ದಿನ ಇರಬೇಕು? ಆನಂದರಾಯರು. ಕೋಣೆಯ ಬಾಡಿಗೆಯನ್ನು ಹೇಳಲೊಲ್ಲರು. ಮೊದಲಿನ ಮನೆಗೆ ........? ಛೇ, ಅಲ್ಲಿಗೆ ಹೋಗುವದು ಸಾಧ್ಯವೇ ಇಲ್ಲ. ಅದನ್ನು ಬಿಟ್ಟು ಸುದ್ದಿಯನ್ನು ಮಾಲಕರಿಗೆ ತಿಳಿಸಿ ಬಿಡಬೇಕು. ಸ್ನೇಹಲತೆಯ ಜಡ್ಡಿನ ಸಲುವಾಗಿ ಊರ ಬಿಟ್ಟು ಅಷ್ಟು ದೂರ ತೋಟದಲ್ಲಿಯ ಬಂಗಲೆಯನ್ನು ಹಿಡಿದೆ. ಈಗ ಅಲ್ಲಿ ಹೇಗೆ ಇರುವುದು ........? ಸಧ್ಯ ಈ ಕೋಣೆ ಚೆನ್ನಾಗಿದೆ. ಎಲ್ಲ ಸೌಕರ್ಯ ಗಳೂ ಇವೆ. ಆನಂದರಾಯರು ಬಾಡಿಗೆ ತೆಗೆದುಕೊಂಡರೆ ಹಿತವಾಗುವದು.

ಆನಂದರಾಯರು ಈ ದಿನ ಸಂಜೆ ನನ್ನ ವ್ಯವಸಾಯದ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದರು. ನನ್ನ ಲೇಖನಗಳು ಅವರ ಮನಸ್ಸಿಗೆ ಬಹಳ ಸೇರುತ್ತಿವೆಯಂತೆ. ಅಹುದು; ಅಂತೆಯೆ ಅವರು ಮೊದಲ ಸಲ ನನ್ನ ಭೆಟ್ಟಿ ಯಾದಾಗ, ಕಾವ್ಯ ವಿಮರ್ಶೆಯ ಮೇಲೆ ನಾನು ಬರೆದ ಲೇಖನದ ಬಗ್ಗೆ ಹೊಗಳಿ ಮಾತನಾಡಿದರು. ನೋಡಿದರೆ ಆನಂದರಾಯರು ವಕೀಲರು. ಅವರಿಗೆ ಕಾವ್ಯ ಮತ್ತು ಕಾವ್ಯವಿಮರ್ಶೆಯಲ್ಲಿ ಇಷ್ಟು ಆಸಕ್ತಿ ಹೇಗೆ ಬಂದಿ ದೆಯೊ! ಇಂಥ ವಕೀಲರು ಇರುವುದು ತೀರಕಡಿಮೆ. ವಕೀಲರು ಸಾಹಿತ್ಯಕ್ಕಿಂತ ರಾಜಕಾರಣದಲ್ಲಿ ಭಾಗವಹಿಸುವುದು ಬಹಳ. ಸ್ನೇಹಲತಾ! ಸ್ನೇಹಲತಾ! ಸ್ನೇಹಲತಾ! ...... ನಿನ್ನ ಹೆಸರು ಅನೇಕ ಸಲ ಬರೆದರೂ ನನಗೆ ಸಮಾ ಧಾನವಿಲ್ಲ. ನಿನ್ನನ್ನು ನೆನೆಯದೆ ನಾನು ನಿದ್ದೆಹೋಗುವುದು ಅಶಕ್ಯ.

೧೭—೯—೧೯....

ಈ ದಿನ ಆನಂದರಾಯರ ಮನೆಯಲ್ಲಿ ಒಂದು ವಿಶೇಷ ಸಂಗತಿ ನಡೆ ಯಿತು. ನಾವು ಕೋಣೆಯಲ್ಲಿ ಕುಳಿತು ಮಾತನಾಡುವಾಗ ಹೊರಗೆ ಯಾರೋ ಗುಣು-ಗುಣು ಹಾಡುವುದು ಕೇಳ ಬಂದಿತು. ಆ ಧ್ವನಿಯ ಬಗ್ಗೆ ಕೇಳಿದೆ. ಆನಂದರಾಯರು ಕೂಡಲೇ ಅವಳನ್ನು ಕರೆಯಿಸಿ ಹಾಡುಹೇಳಲು

ಆಜ್ಞಾಪಿಸಿದರು. ಅವಳು ಮೊದಲು ನಾಚಿಕೊಂಡಳು. ಮಹಿಳೆಯರಿಗೆ ಇದು ಸಹಜವಾದುದು. ತರುವಾಯ ಪೇಟಿ ತೆಗೆದುಕೊಂಡು ಹಾಡಿದಳು. ಆಹಾ! ಕಂಠ ಎಷ್ಟು ಮಧುರವಾಗಿತ್ತು! ಅದು ಅವಳು ಹಾಡಿದ ದು "ನನ್ನ ಹಾಡು." ಅವಳ ಹಾಡುಗಾರಿಕೆ ನನ್ನ ಮನಸ್ಸಿಗೆ ಅತ್ಯಂತ ಸುಖದಾಯಕವಿತ್ತು. ಇನ್ನು ಬೇಸರಿಕೆ ಬಂದಾಗ ಆ ಹಾಡುಗಳನ್ನು ಕೇಳಬೇಕು.

೨೨—೯—೧೯....

ನಾಲ್ಕು ದಿನ ದಿನಚರಿ ಬರೆಯುವದಾಗಲಿಲ್ಲ ಪರಊರಲ್ಲಿರುವಾಗ ಹೇಗೆ ಬರೆಯುವದಾಗುವದು ? ನಾನು ಮಾಡಿದ ಭಾಷಣ ಎಲ್ಲರಿಗೂ ಮನಸ್ಸಿಗೆ ಬಂದಂತೆ ತೋರಿತು. "ಜೀವನದಲ್ಲಿ ಸ್ತ್ರೀಯರ ಸ್ಥಿತಿಗತಿ"ಗಳ ಬಗ್ಗೆ ಹೇಳುವಾಗ, ಮುಖ್ಯತಃ ಸ್ತ್ರೀಯರು ಬಹಳ ತಲ್ಲೀನರಾಗಿ ಕೇಳುತ್ತಿದ್ದರು. ವಿಷಯವೂ ಹಾಗೇಯೇ ಇತ್ತು. ಅಹುದು—ಪತಿ ಸತ್ತರೆ ಸ್ತ್ರೀಯರ ಗೋಳು ಹೇಳತೀರದಷ್ಟಿದೆ. ಸಮಾಜದಲ್ಲಿ ಅವರಿಗೆ ಎಂಥ ನಿಂದ್ಯಸ್ಥಾನ! ಅವರು ಸುಶೋಭಿತರಾಗಿ, ಮತ್ತೊಮ್ಮೆ ಮದುವೆಯಾಗಿ ಸುಖವಾಗಿ ಕಾಲಕಳೆಯಲಾರರು! ಅದೇ ಗಂಡಸರ ಸ್ಥಿತಿ ಹಾಗಲ್ಲ. ಅವರಿಗೆ ಮುಕ್ತದ್ವಾರ. ನನ್ನ ಈ ಮಾತು ಕೇಳಿ ಸ್ತ್ರೀಯರು ಸುಮ್ಮನೆ ಇದ್ದರು. ಒಮ್ಮೊಮ್ಮೆ ಅನಿಸುತ್ತದೆ—ಸ್ತ್ರೀಯರು ವಿಚಾರವನ್ನೇ ಮಾಡುವುದಿಲ್ಲವೋ ಏನೊ!

ಚಿಕ್ಕ ಊರಿನಲ್ಲಿ ಸಹ ಅದೆಷ್ಟು ಜನ ಸ್ತ್ರೀಯರು ಅಲ್ಲಿ ನೆರೆದಿದ್ದರು! ಬಹುತರ ಗುಡಿಯಲ್ಲಿ ನನ್ನ ಭಾಷಣವಿದ್ದಿತೆಂದೇ ಹಾಗೆ ಇರಬಹುದು, ಇರಲಿ.

ಭಾಷಣ ಮುಗಿದಮೇಲೆ ಗುಂಡಕ್ಕ ಭೆಟ್ಟಿಯಾಗಿದ್ದಳು. ನನ್ನ ದುಃಖದ ಸುದ್ದಿ ಕೇಳಿ ಬಹಳ ಮರಗಿದರು. ಕಣ್ಣಲ್ಲಿ ನೀರು ತಂದಳು ಸ್ನೇಹಲತೆಯ ಸಂಗಡ ಮದುವೆಯಾಗುವಾಗ ಅದು ಪ್ರೀತಿಯ ವಿವಾಹವೆಂದು, ಇದೇ ಗುಂಡಕ್ಕ ಎಷ್ಟು ವಿರೋಧಿಸಿದ್ದಳು! ಈಗ ಅವಳೇ ಅಂಥವಳೇ ಕಣ್ಣೀರನ್ನು ಸುರಿಸಿದಳು. ಸಂಪ್ರದಾಯದ ಹೆಂಗಸರಲ್ಲಿ ಇದೊಂದು ದೊಡ್ಡಗುಣ ಅನಬೇಕು ಹಾಗೆ ನನಗೆ ಅನಿಸುತ್ತದೆ.

ಆ ಊರಲ್ಲಿ ನನಗೆ ಪರಿಚಿತ ಜನ ಬಹಳ. ಗೋದಕ್ಕನ ಭೆಟ್ಟಿಯೂ ಆಗಿತ್ತು. ಅವಳು ಎಲ್ಲ ನನ್ನ ಕಥೆ ಕೇಳಿಕೊಂಡಳು. ಹೊರಡುವಾಗ ಒಂದು ಮಾತು ಹೇಳಿದಳು- "ಮದುವೆಯ ವಿಚಾರ ಏನಾದರೂ ........?" ಆ ಮಾತನ್ನು ನಾನು ಒಮ್ಮೆಲೆ ತಿರಸ್ಕರಿಸಿ ಬಿಟ್ಟೆ. ಗೋದಕ್ಕ ಮತ್ತೆ ಹೇಳಿದಳು—"ಇಲ್ಲ, ಎಳೆ ಹುಡುಗ. ಸಾಯುವವರೆಗೆ ಹೀಗೇ ಇರಬೇಕೆ?" ಪಾಪ! ಗೋದಕ್ಕನಿಗೇನು ಗೊತ್ತು! ಹೆಂಗರುಳು! ಹಾಗೆ ಹೇಳಿದಳು. ಏಕಾಕಿಯಾಗಿ ಜೀವನ ಸಾಗಿಸಲು ಸಾಧ್ಯವಿಲ್ಲವೇ? ಮನಸ್ಸು ಮಾಡಿದರೆ ಎಲ್ಲವೂ ಸಾಧ್ಯ.

"ಬ್ರಹ್ಮಚರ್ಯವೇ ಜೀವನ" ಈ ಗ್ರಂಥವನ್ನು ಇಂದೇ ಓದಲು ಆರಂಭಿಸಿದ್ದೇನೆ.

೨೩—೯—೧೯....

ಇಂದೇ ಮೇಲಿಗೆ ಆನಂದರಾಯರು ಮುಂಬೈಗೆ ಹೋದರು. ನನ್ನ ಅರ್ಜಿಗಳನ್ನೆಲ್ಲಾ ತೆಗೆದುಕೊಂಡು ಹೋಗಿದ್ದಾರೆ. ಸರಕಾರೀ ಪ್ರಚಾರ ಪತ್ರಿಕೆಯ ಸಂಪಾದಕ ಮಂಡಲದಲ್ಲಿ ಸೇರ್ಪಡೆಯಾಗುವಂತೆ ಯತ್ನಿಸುವರಂತೆ! ಸರಕಾರೀ ನೌಕರೀ; ಮೇಲಾಗಿ ಹೆಚ್ಚಿನ ಪಗಾರ; ನನ್ನ ದೈವ ಹೇಗಿದೆಯೋ ನೋಡಬೇಕು. ಇದೆಲ್ಲ ಶೇಖಮಹಮ್ಮದನ ಲೆಖ್ಖ ಆಗಬಾರದು ಅಷ್ಟೆ.

ಏನೇ ಆದರೂ ಆನಂದರಾಯರು ನನ್ನ ಸಲುವಾಗಿ ಇಷ್ಟು ಚಿಂತಿಸುವದನ್ನು ನೋಡಿ ಅತೀವ ಹರ್ಷವಾಗುತ್ತದೆ. ಇಷ್ಟೆಲ್ಲ ಯಾರು ಮಾಡುವರು? ಸ್ನೇಹಲತೆಯ ಸಂಗಡ ಪ್ರೀತಿವಿವಾಹವಾಯಿತೆಂದು ನನ್ನ ಬಂಧುಬಳಗದವರೂ ನನ್ನನ್ನು ಮಾತನಾಡಿಸುವದನ್ನೇ ಬಿಟ್ಟುಬಿಟ್ಟಿದ್ದಾರೆ. ಅವಳು ಮೂರು ವರ್ಷವೇ ಇದ್ದಳು- ನೂರು ವರ್ಷ ಇರಲಿಲ್ಲ. ನಮ್ಮ ಜನರೆ ಏನಾದರೂ ಮಾಟವನ್ನೆ ಮಾಡಿಸಿದರೋ ಏನೋ! ಕ್ಷಯದಿಂದ ಸಾಯಬೇಕಾದರೆ! ಇರಲಿ, ಆದುದು ಆಗಿಹೋಯಿತು. ಈಗಾದರೂ ಒಂದು ಒಳ್ಳೆಯ ಮಾತು! ಇಂಥ ಸಂದರ್ಭದಲ್ಲಿ ಆನಂದರಾಯರ ಸಹವಾಸ ಚೈತನ್ಯ ಕೊಡುತ್ತಿದೆ. ನನ್ನ ಬಗ್ಗೆ ಅವರು ಎಷ್ಟು ಕಾಳಜೀ ತೆಗೆದುಕೊಳ್ಳುತ್ತಾರೆ!

ಜೀವನದ ಕಹಿ ಗುಳಿಗೆಯನ್ನು ಒಬ್ಬನೇ ನುಂಗಬೇಕಿಲ್ಲ. ಅಲ್ಲ–ಜೀವನದ ಕಹಿಯೂ ಕಡಿಮೆಯಾಗುತ್ತಿವೆ- "ಚೇತರಿಸಿ ಕೊಂಡೇಳೆ, ಜೀತನಪ ಚೆಲುವೆ."

೨೬—೯—೧೯....

ಮತ್ತೆ ಹಲವು ದಿನ ಬರೆಯುವದಾಗಲಿಲ್ಲ. ನನ್ನ ದಿನಚರಿ ಬರೆಯುವ ಕೆಲಸ ಹೀಗೇಕೆ ಆಗುತ್ತಿದೆ?

ಈ ತಲೆಶೂಲಿ ಬಹಳ ತ್ರಾಸು ಕೊಡುತ್ತಿದೆ. ಆಫೀಸಿನಲ್ಲಿ ಕುಳಿತು ಕೆಲಸ ಮಾಡುವುದೇ ಆಗಲೊಲ್ಲದು. ರಾತ್ರಿ ಅಭ್ಯಾಸವೂ ಇಲ್ಲ. ನಿದ್ದೆಯೂ ಚೆನ್ನಾಗಿ ಬರವೊಲ್ಲದು- ಮೈಯೆಲ್ಲ ನೋವು! ಈ ಸಮಯದಲ್ಲಿ ಯಾರಾದರೂ " ಸಂಗಾತಿ " ಇದ್ದರೆ ........ !

ಈದಿನ ಸಂಜೆ ತಲೆಶೂಲಿ ಮತ್ತೆ ಹೆಚ್ಚಾಯಿತು, ಮುಸುಕು ಹಾಕಿಕೊಂಡು ಮಲಗಿದೆ. ಸ್ವಲ್ಪ ನಿದ್ದೆ ಬಂದಂತಾಯಿತು. ಏನೋ ಬಳೆಗಳ ಸಪ್ಪಳವಾದಂತಾಯಿತು. ನಾನು ಮುಸುಕು ತೆರೆಯಲೆ ಇಲ್ಲ... ಮತ್ತೆ ಬಾಗಿಲ ಸಪ್ಪಳವಾದಂತಾಯಿತು. "ಯಾರು?" ಎಂದು ಕೇಳುವಂತಾಗದೆ, ಮುಸುಕು ತೆರೆದೆ. ಬಾಗಿಲದಲ್ಲಿ ಆನಂದರಾಯರ ಮಗನಿದ್ದ! "ಚಹಾ ತಗೊಂಡ್ರೇನ್ರೀ?" ಎಂದು ಕೇಳಿದ. ಈ ಬಳೆಗಳ ಸಪ್ಪಳ ನಿಜವೋ ಸುಳ್ಳೊ!

೨೭—೯—೧೯....

ಈ ದಿನ ವಿಶ್ರಾಂತಿಗಾಗಿ ರಜೆ ಪಡೆದುಕೊಂಡೆ. ಡಾಕ್ಟರರಿಂದ ಔಷಧವನ್ನೂ ತಂದಿರುವೆ. ಹಾಸಿಗೆಯ ಮೇಲೆ ಹೊರಳಾಡಿ ಬೇಸರಿಕೆ ಬಂದಿತು. ಮಧ್ಯಾಹ್ನ ಬಾಗಿಲಲ್ಲಿ ನಿಂತುಕೊಂಡಿದ್ದೆ. ಓಣಿಯಲ್ಲಿ ಹಲವು ಹುಡುಗರು ಪಾರಿವಾಳಗಳನ್ನು ಹಾರಿಸುತ್ತಿದ್ದರು. ಇಂದು ಆಕಾಶವು ಸ್ವಚ್ಛವಿತ್ತು. ಆ ನೀಲಾಕಾಶದಲ್ಲಿ, ಆ ಸೂರ್ಯನ ತೇಜಃಪುಂಜದ ಬೆಳಕಿನಲ್ಲಿ ಪಾರಿವಾಳಗಳು ಹಾರಿಹೋಗುತ್ತಿದ್ದವು. ಚಿಕ್ಕ ಮಗುವಿನ ಹಾಗೆ ನಾನು ಅವುಗಳನ್ನೇ ನೋಡುತ್ತ ನಿಂತೆ. ನಾವೆಲ್ಲ ಪಾರಿವಾಳಗಳು. ಪ್ರೀತಿಯಿಂದ ಆಟವಾಡಿ

ತಮ್ಮ ಗೂಡಿಗೇ ತಿರುಗಿ ಬರುವಂತೆ, ನಾವೂ ದೇವರ ಕಡೆಗೆ ಬರುತ್ತೇವೆ. ಇಂಥ ತತ್ವಜ್ಞಾನದ ವಿಚಾರಗಳೂ ನನ್ನ ತಲೆಯಲ್ಲಿ ಸುಳಿದವು. ಆ ಪಾರಿವಾಳ ಹಾರಿಸುವ ಹುಡುಗ ಒದರಿದ. "ನೋಡಲೇ ನೋಡು, ಅವು ಗಂಡು–ಹೆಣ್ಣು, ಅದಕ್ಕ s ಎಷ್ಟು ಕೂಡಿಕೊಂಡು ಮ್ಯಾಲ ಹಾರಿದವು." ಪಕ್ಷಿಗಳಲ್ಲಿಯೂ ಪ್ರೇಮ ಇಷ್ಟು ಹೆಚ್ಚಾಗಿದೆ?

ನಾನು ಈ ರೀತಿಯಾಗಿ ಪಕ್ಷಿಗಳನ್ನು ನೋಡುವಾಗ ನನ್ನ ಹಿಂದೆ ಮತ್ತೊಂದು ಪಕ್ಷಿ ಇರುವ ಕಲ್ಪನೆ ನನಗೆ ಬರಲಿಲ್ಲ. ಕಿಡಕಿಯಲ್ಲಿ ಅವಳ ಮುಖ ಕಂಡಿತು. ಇಂದೇ ಅವಳು—ಎರಕೊಂಡಿದ್ದಳೋ ಏನೋ! ಮುಖದಲ್ಲಿ ವಿಶೇಷ ಕಳೆಯಿದ್ದಿತು. ಅವಳ ನೋಟ ನನ್ನ ಕಡೆಗೇ ಇದ್ದಿತು. ನಾನು ಮುಖ ಹೊರಳಿಸಿ ನೋಡಿದಾಗ ಒಂದು ಕ್ಷಣದಲ್ಲಿಯೆ ನನಗೆ ಇವೆಲ್ಲ ಹೊಳೆದವು.

೨೮—೯—೧೯....

ಆನಂದರಾಯರ ಸಂಗಡ ವಿಶೇಷ ಮಾತುಕತೆಗಳಾದವು. ನನ್ನ ಕೆಲಸವಾಗುವುದು ಸಂಪೂರ್ಣ ಆಶಾದಾಯಕವಿದೆಯಾಗಿ ಕಂಡುಬರುತ್ತಿದೆ. ನನ್ನ ದೈವ ತೆರೆಯಬಹುದೆ?

ನನ್ನ ಪ್ರಕೃತಿಯ ಬಗ್ಗೆ ಬಹಳ ಕಾಳಜೀ ತೆಗೆದುಕೊಂಡು ಕೇಳಿದರು. "ನನ್ನ ತಲೆಶೂಲೆ ಹಾಗೆ ಹೋಗುವುದಿಲ್ಲ" ಎಂದರು. ಅವರ ಮಾತಿನ ಮಥಿತಾರ್ಥ ನನಗೆ ಹೊಳೆಯಿತು. ಮುಖ ಕೆಳಗೆ ಮಾಡಿದೆ.

ನಾನು ಅವರ ಕೋಣೆಯಿಂದೆದ್ದು ಹೊರಗೆ ಬರುತ್ತಿರುವಾಗ "ಇವೊತ್ತಾದರೂ ಕೇಳಿದಿರಾ?" ಎಂದು ಹೆಂಗಸರು ಅವರನ್ನು ಒಳಗೆ ಕರೆದು ಕೇಳಿದರು. ಅದು ನನ್ನ ಬಗ್ಗೆಯೇ ಇರಬೇಕೆಂದು ನನಗೆ ನಿಶ್ಚಿತವೆನಿಸಿತು.

ಈ ಬಲೆಯಲ್ಲಿ ನಾನು ಬೀಳಲಿಕ್ಕಿಲ್ಲವೆಂದು ನನಗೆ ಅನಿಸುತ್ತದೆ. ಈಗಂತೂ ಈ ಕೋಣೆ ಬಿಡಲು ಸಾಧ್ಯವಿಲ್ಲ. ಬೇಗ ಮುಂಬೈಗೆ ಹೋಗುವುದಾಗಬಹುದು. ಆ ಮೇಲೆ ಈ ಪ್ರಶ್ನೆಯೆ ಉದ್ಭವಿಸುವುದಿಲ್ಲವಲ್ಲ?

೨೯—೯—೧೯....

ಇಂದು ನಮ್ಮ ಆಫೀಸದಲ್ಲಿ ವಿಶೇಷ ಚರ್ಚೆ ನನ್ನ ಬಗ್ಗೆ ನಡೆಯಿತು. ಇದಕ್ಕೆ ಕಾರಣ ಜಾಹೀರಾತು. ಒಬ್ಬ ಮನುಷ್ಯ ಒಂದು ಪ್ರಕಟಣೆಯನ್ನು ಜಾಹೀರಾತಿಗಾಗಿ ಕಳುಹಿದ್ದ. ಅವನಿಗೆ ಎರಡು ಹುಡುಗರು; ಮೊದಲನೆಯ ಹೆಂಡತಿ ಸತ್ತಿದ್ದಾಳೆ; ಅವನಿಗೆ ಲಗ್ನವಾಗುವ ಆಶೆಯಿದೆಯಂತೆ ಅದಕ್ಕಾಗಿ ಯೋಗ್ಯ ವಧು ಬೇಕೆಂದು ಪ್ರಕಟಣೆ ಕೊಟ್ಟಿದ್ದನು. ಇದರ ಎಳೆಯನ್ನು ಹಿಡಿದು ನನ್ನ ಮಿತ್ರರು ನನಗೆ ಚೇಷ್ಟೆಮಾಡಿದರು. “ನನಗಂತೂ ಮಕ್ಕಳಿಲ್ಲ. ಏಕೆ ಲಗ್ನವಾಗಬಾರದು ?” ಎಂದು ಕೇಳಿದರು. ಬೇರೆ ಬೇರೆ ಹೆಣ್ಣುಗಳ ವರ್ಣನೆಮಾಡಿ, ಅವುಗಳನ್ನು ತಂದುಕೊಡುವದಾಗಿ ಚೇಷ್ಟೆಯಿಂದ ಹೇಳಿದರು ....... ಇವರ ಮುಂದೆ ನಾನೇನು ಮಾಡಬೇಕು !

೩೦—೯—೧೯....

ಆನಂದರಾಯರೂ ಅವರ ಮಗಳೂ ಕೂಡಿ ತಿರುಗಾಡಲು ಹೊರಟಿದ್ದರು. ನನ್ನನ್ನು ಕರೆದರು. ಒಪ್ಪಿಕೊಳ್ಳಬೇಕಾಯಿತು.

ಒಮ್ಮೆ ಮದುವೆಯಾದ ಮೇಲೆ ಹೆಂಗಸರ ಎದುರು ನಿರ್ಭಿಡೆಯಿಂದ ಮಾತನಾಡಲು ಅನುಕೂಲ. ಏನೂ ಸಂಕೋಚವೆನಿಸುವದಿಲ್ಲ. ನನಗೂ ಒಮ್ಮೆ ಮದುವೆಯಾಗಿದೆ ಒಬ್ಬ ಹಿರಿಯನಂತೆಯೇ ಎಲ್ಲವನ್ನೂ ಮಾತನಾಡಿದೆ. ಹುಡುಗೆಯೂ ದಿಟ್ಟಸ್ವಭಾವದವಳು. ನಾವೆಲ್ಲರೂ ಹೊರಟಾಗ ನಮ್ಮ ಮಾತುಗಳಲ್ಲಿ ತಾನೂ ದನಿಗೂಡಿಸುವಳು. ಅವಳ ಧ್ವನಿ ಮಧುರವಾಗಿದೆ. ಈ ದಿನ ರಾತ್ರಿ ಊಟವಾದ ಮೇಲೆ ಹಾಡುತ್ತಿದ್ದಳು. ಗಂಧರ್ವ ಲೋಕದಿಂದ ಗಾನದ ತೆರೆಗಳು ಬಂದಂತೆ ಭಾಸವಾಯಿತು.

ನನ್ನ ಮನಸ್ಸು ಹೀಗೇಕೆ? ಅವಳದೇ ಚಿತ್ರ ನನ್ನ ಕಣ್ಣಮುಂದೆ ಏಕೆ? ಛೀ ...... ಮುಸುಕ ಹಾಕಿಕೊಂಡು ಮಲಗಿಬಿಡೋಣ.

೧—೧೦—೧೯....

ಇಂದು ಒಂದು ಅತ್ಯಾನಂದದ ಸಂಗತಿ! ಆನಂದರಾಯರ ಪ್ರಯತ್ನದಿಂದ ಫಲಿಸಿದೆ. ಇನ್ನು ಮುಂಬೈಗೆ ಹೋಗಬೇಕು. ಆದರೆ ಅಲ್ಲಿ ಇರುವ

ವ್ಯವಸ್ಥೆ ಹೇಗೆ? ಇದರ ಬಗ್ಗೆಯೇ ಆನಂದರಾಯರು ತಮ್ಮ ವಿಚಾರ ತಿಳಿಸುವದಾಗಿ ಹೇಳಿದ್ದಾರೆ.

ಇನ್ನು ನನ್ನ ಲಗ್ನದ ವಿಚಾರ ಏನೂ ಇಲ್ಲವೆಂದು ಭಾವಿಸಿದ್ದೆ. ಆದರೆ ಆನಂದರಾಯರು ಸ್ಪಷ್ಟವಾಗಿ ತಮ್ಮ ಮನಸ್ಸಿನಲ್ಲಿರುವದನ್ನು ಹೇಳಿಬಿಟ್ಟಿದ್ದಾರೆ. ಏನು ಮಾಡಬೇಕು ತಿಳಿಯದು. ಈಗಂತೂ ನಾನು ಅವರ ಮುಂದೆ ಏನೂ ಉತ್ತರಕೊಟ್ಟಿಲ್ಲ. ಸ್ನೇಹಲತೆಗೆ ವಚನಕೊಟ್ಟಿದ್ದೇನೆ. ಅದನ್ನು ಮುರಿಯುವದೆಂತು? ಇತ್ತಕಡೆ ಆನಂದರಾಯರ ಮಾತನ್ನು ಮೀರುವ ಹಾಗಿಲ್ಲ. ಅವರು ಕಷ್ಟಕಾಲದಲ್ಲಿ ನನಗೆ ಧನ ಸಹಾಯ ಮಾಡಿದ್ದಾರೆ. ಬೇರೆ ರೀತಿಯಿಂದಲೂ ನೆರವಾಗಿದ್ದಾರೆ. ಏನು ಮಾಡಬೇಕು?

೨—೧೦—೧೯....

ಮನಸ್ಸಿನ ತೊಡಕು ಬಿಡಲೊಲ್ಲದು. ಮುಂಬೈಯ ಕೆಲಸ ಬಿಟ್ಟು ಬಿಡಲೇ? ಈ ಕೋಣೆಯನ್ನು ಬಿಟ್ಟುಬಿಡಲೇ? ಇಲ್ಲಿಂದ ದೂರ ಹೋಗಿ ಬಿಡಲೆ? ಯಾರಾದರೂ ಹುಚ್ಚನೆಂದಾರು!

ಮನಸ್ಸಿಗೆ ವಿರಾಮವಾಗಲು "Twelfth Night" ಎಂಬ ನಾಟಕ ಓದಲು ಆರಂಭಿಸಿದೆ. "If music be the food of love, give me the excess of it" ಎಂಬುದೇ ಮೊದಲ ವಾಕ್ಯಗಳು. ಈ ಮಾತುಗಳು, ಅವಳ ಚಿತ್ರವನ್ನು ನನ್ನ ಕಣ್ಣೆದುರು ನಿಲ್ಲಿಸಿದವು. ಅವಳು ನನ್ನ ಕವನಗಳನ್ನು ಹಾಡಬೇಕು. ನಾನು ಅವುಗಳನ್ನು ಕೇಳಬೇಕು. ಹೀಗೇ ಹೀಗೆಯೇ ಇರಬೇಕು. ಅಂದರೆ ಎಂಥ ಸುಖಮಯ ಜೀವನ!

ಹಾಂ! ಏನು ಬರೆಯುತ್ತಿದ್ದೇನೆ ನಾನು? ಇದನ್ನು ಯಾರಾದರೂ ನೋಡಿದರೆ? ಛೇ, ದಿನಚರಿಯಲ್ಲಿ ಎಲ್ಲವನ್ನು ಬರೆದುಬಿಡುವೆ.

೩—೧೦—೧೯....

ಆಫೀಸಿನಲ್ಲಿ ಈಗ ನನಗೆ ವಾರ ಪತ್ರಿಕೆಯ ಕೆಲಸ ಬಿದ್ದಿದೆ. ಅದರಲ್ಲಿಯೂ "ಸಿನಿಮಾ ಪುಟ" ನಾನು ಸಂಪಾದಿಸಿ ಕೊಡಬೇಕು. ಏನು,

ಅದರಲ್ಲಿ ಪ್ರೇಮದ ಚಿತ್ರಗಳು ಎಷ್ಟು ಇವೆ? ಪ್ರೇಮಕ್ಕೆ ಜಗತ್ತಿನಲ್ಲಿ ಬಹಳ ಮಹತ್ವವಿದೆ. ಆ ಎಲ್ಲ ಚಿತ್ರಗಳನ್ನು ನೋಡುತ್ತ ಚಿರಕಾಲ ಕಳೆದೆ.

ನಿರಾಶ್ರಿತರು ಈ ಊರಿಗೆ ಬಂದಿದ್ದಾರೆ. ಅವರನ್ನು ಸಂದರ್ಶಿಸಿ ಅವರ ಜೀವನದ ಬಗ್ಗೆ ಒಂದು ಲೇಖನ ಬರೆಯಬೇಕಿತ್ತು. ಅವರ ದುಃಖದ ಕತೆಗಳನ್ನು ಕೇಳಿ ಹೃದಯ ಒಡೆದು ಹೋಗುತ್ತದೆ. ಎಲ್ಲವನ್ನೂ ಕಳೆದು ಕೊಂಡು, ಈಗ ಎಲ್ಲಿಯೋ ಅಪರಿಚಿತ ಜಗತ್ತಿನಲ್ಲಿ ವಾಸಮಾಡಬೇಕಾಗಿದೆ. ಒಂದು ಮನೆತನದವರು ಹೇಳಿದ ಮಾತುಗಳು ನನ್ನ ಮನಸ್ಸನ್ನು ಬಹಳ ಆಕರ್ಷಿಸಿದವು. ಏನೇ ತ್ರಾಸವಾದರೂ ಗಂಡ–ಹೆಂಡಿರು ಮತ್ತು ಮಕ್ಕಳು ಕೂಡಿಕೊಂಡು ಸುಖವಾಗಿ ಬಾಳಲು ಬರುವದಂತೆ !!

ಈ ದಿನ ಥಾಮಸ್ ಹಾರ್ಡಿ ಕವಿಯು ಬರೆದ - "Yonder a maid and her wight come whisp'ring by; War annals will cloud into night ere their story die" ವ್ಯಾಕ್ಯಗಳು ಬಹಳ ನೆನಪಾಗುತ್ತವೆ. ಮಾನವ ಪ್ರಣಯ ನಿರಂತರ; ನಿತ್ಯ ನೂತನ.

೪—೧೦—೧೯....

ಮುಂಬಯಿಯಲ್ಲಿ ನನಗೆ ವಸತಿಯ ಏರ್ಪಾಡೂ ಆಯಿತು. ಇನ್ನು ನಾನು ಇಲ್ಲಿಯ ಕೆಲಸ ಬಿಡುವುದರ ಬಗ್ಗೆ ಆಫೀಸಿನಲ್ಲಿ ಹೇಳಬೇಕು. ಬೇಗ ಮುಂಬಯಿಯಲ್ಲಿ ಹೊಸ ಕೆಲಸ ಸ್ವೀಕರಿಸಲು ಹೋಗಬೇಕು.

ಮುಂಬೈಗೆ ಹೋಗುವ ಮೊದಲು ಲಗ್ನವಾಗಿಯೆ ಹೋಗಬೇಕೆಂದು ಆನಂದರಾಯರು ಹೇಳುತ್ತಿದ್ದಾರೆ. ಲಗ್ನದ ಬಗ್ಗೆ ತಮ್ಮ ಜುಲುಮೆ ಇಲ್ಲ ವೆಂದೂ, ಮನಸ್ಸಿದ್ದರೆ ಮಾಡಿಕೊಳ್ಳಬೇಕೆಂದೂ ಅನ್ನುತ್ತಾರೆ. ಅವರು ಹೀಗೆ ಅಂದರೂ ನಾನು ಸುಮ್ಮನಿರಲು ಹೇಗಾಗುತ್ತದೆ? ಏನಾದರೂ ಬೇಗ ನಿರ್ಧ ರಿಸಬೇಕು. ಈ ದಿನ ಅವಳೇ– ಅವಳೆ ಅಂದರೆ ಸರಳಾ - (ಹೆಸರು ಬರೆಯಲು ಏಕೆ ಸಂಶಯ !) ಬಂದು ಚಹಕೊಟ್ಟು ಹೋದಳು.

ಮತ್ತೆ ಅವಳ ಮಾತು! ಅವಳ ನಡಿಗೆ! ಅವಳ ಮುಖ! ಮನಸ್ಸು ಎಷ್ಟು ಬದಲಾಗುತ್ತದೆಯಲ್ಲಾ !!!

ಸ್ನೇಹಲತಾ, ನೀನೇ ನನಗೆ ಮಾರ್ಗವನ್ನು ತೋರಿಸು. ನಿನಗೆ ಶರಣು ಬಂದಿರುವೆ ಒಬ್ಬನೇ ಬಹಳ ದೂರ ತಿರುಗಾಡಿ ಬಂದೆ! ಆದರೂ ವಿಚಾರ ಬಗೆಹರಿಯಲಿಲ್ಲ.

೫—೧೦—೧೯....

ದಾರಿಯಲ್ಲಿ ಊರಲ್ಲಿ ನನ್ನ ಮಿತ್ರ ದೇ....... ಅವರು ಭೆಟ್ಟಿಯಾದರು. ಅವನ ದೈವ ಎಂತಹದೋ! ಲಗ್ನವಾಗಿ ಒಂದು ವರ್ಷದಲ್ಲಿಯೇ ಹೆಂಡತಿಯನ್ನು ಕಳೆದುಕೊಂಡಿದ್ದಾನೆ! ಹೀಗೆ ಎರಡು ಸಲವಾಗಿದೆ! ತನ್ನ ದುಃಖವನ್ನು ಕಡಿಮೆ ಮಾಡಿಕೊಳ್ಳಲು ಈಗ ಪ್ರತಿನಿತ್ಯ ಸಂಜೆ ಒಂದೆಡೆಯ ಹೋಗಿ ಕುಳಿತುಕೊಳ್ಳುತ್ತಾನಂತೆ. ಅಲ್ಲಿ ಸಂಗೀತದ ಏರ್ಪಾಡು ಇದೆ. ಒಮ್ಮೊಮ್ಮೆ ರಾತ್ರಿ ೧೦ ರ ವರೆಗೂ ಅಲ್ಲಿ ಇರುತ್ತಾನಂತೆ! ನನಗೆ ಸ್ವಲ್ಪ ಸಂಶಯ ಬಂದಿತು. ಆಗ ಅವನೆ ನಕ್ಕು ಹೇಳಿದ. "ಹಾಗೇನೂ ತಿಳಿದುಕೊಳ್ಳಬೇಡ. ಅದು ನನ್ನ ಮಿತ್ರನ ಮನೆ, ಹಾಡುವವನೂ ಅವನೆ. ಆದರೆ ಸಿತಾರಾ ಬಾರಿಸುವವಳು ಅವನ ಮಗಳು. ಎಷ್ಟು ರಮ್ಯ ಬಾರಿಸುವಳು! ನೋಡು, ಲಗ್ನವಾದರೆ ಇಂಥ ಹುಡುಗಿಯರನ್ನೇ ಲಗ್ನವಾಗಬೇಕು. ಜೀವನದಲ್ಲಿ ಸುಖ ಇದೆ" ಎಂದ. ಸುಖ ಎಲ್ಲಿ ಇದೆ? ದಾರಿಗಳು ಅನೇಕವಿದೆ. ಆದರೆ ಕೈಗಂಬ ಕಾಣಿಸಹೊಲ್ಲದು! ಸ್ನೇಹಲತಾ ಉತ್ತರ ಹೇಳು.

೭—೧೦—೧೯....

ನನ್ನ ಮನಸ್ಸಿನ ಗೊಂದಲದಲ್ಲಿ ಏನೂ ಬರೆಯುದಾಗಲಿಲ್ಲ. ಸ್ನೇಹಲತಾ, ನಿನ್ನ ರೂಪ "ಸರಳೆ"ಯಲ್ಲಿದೆ ಎಂದು ನನಗೆ ಎನಿಸುತ್ತಿದೆ. ಇದಕ್ಕೆ ನಿನ್ನ ಒಪ್ಪಿಗೆ ಇದೆಯೆ???

೮—೧೦—೧೯....

ಒಪ್ಪಿಕೊಂಡಿದ್ದೇನೆ. (೧) ಮುಂಬೈಗೆ ಹೋಗುವುದು. (೨) ಆನಂದರಾಯರ ಮಾತು ಕೇಳುವುದು. ಆನಂದರಾಯರ ಮಾತಿನ ವಿರುದ್ಧ ಹೋಗು

ವುದು ಸಾಧ್ಯವೇ ಇಲ್ಲ. ಅಲ್ಲ, ಪ್ರೀತಿಯೆ ಹೀಗೆ ಇದೆಯೋ ಯಾರಿಗೂ ಹೇಳಲು ಬರುವುದಿಲ್ಲ.

೧೦—೧೦—೧೯....

ಆನಂದರಾಯರಿಗೆ ವಿಜೃಂಭಣೆಯಿಂದ ಮದುವೆ ಮಾಡಬಾರದೆಂದು ಹೇಳಿರುವೆ. ಎಲ್ಲಿಯಾದರೂ ಗುಡಿಯಲ್ಲಿ ಮಂಗಲಕಾರ್ಯ ತೀರಿಸಿಕೊಂಡು ಹೋದರಾಯಿತು. ಅವರೂ ಒಪ್ಪುವರೆಂದು ನಂಬಿರುವೆ.

೧೫—೧೦—೧೯....

ಎಲ್ಲಕಡೆಗೂ ಬೇರೆ ಬೇರೆ ಉತ್ಸಾಹ ಕಂಡು ಬರುತ್ತಿದೆ. ಮುಂಬೈಗೆ ಬಂದು ಕೆಲಸಕ್ಕೆ ಹಾಜರಾಗಿದ್ದೇನೆ. ಮತ್ತೆ ಮದಿವೆಯ ಕಾರ್ಯಕ್ಕೆ ಊರಿಗೆ ಹೋಗಬೇಕು!

ನಾನು ಬೇಡವೆಂದು ಹೇಳಿದ್ದೆ. ಆವರೆ " ನವೋದಯ " ಪತ್ರಿಕೆಯಲ್ಲಿ ಇದೇನು? ಭಾವಚಿತ್ರಗಳು ಬಂದಿವೆ. ಮದುವೆಯ ಆಮಂತ್ರಣ ಎಲ್ಲರಿಗೂ ಹೋಗಿದೆ.

ಭಾವಚಿತ್ರಗಳಿಗೆ ಸುಂದರವಾದ ಬಾರ್ಡರ ಇದೆ. ೧೪—೧೦—೧೯... ಈ ದಿನಾಂಕದ "ನವೋದಯ" ಪತ್ರಿಕೆ ತೆಗೆದಿಡಬೇಕೆ?

# ಮಿಂಚು.

"ಸಾವಿತ್ರಿ, ಇದು ಏನು ? ನನ್ನಾಣೆಯಾಗಿದೆ. ಹೀಗೆ ಮಾಡಬೇಡ ! ಇದು ಒಳ್ಳೆಯದಲ್ಲ. ಬಿಡು, ಬಿಡು........! ನಾಲ್ಕು ಜನ ನೋಡಿದರೆ ಏನು ಅಂದಾರು ?"

"ಅನ್ನಲಿ. ಏನೇ ಅನ್ನಲಿ ನಾನು ಯಾವ ಜನಕ್ಕೂ ಹೆದರುವದಿಲ್ಲ ತನ್ನ ತಲೆ ಈ ದಿನ ಒಡೆದು ಹೋಗಲಿ! ಯಾರಿಗೆ ಬೇಕಾಗಿದೆ ? ?"

"ನನಗೇ ಬೇಕಾದದ್ದು ಸಾವಿತ್ರಿ! ಹಬ್ಬದ ದಿನ ಹೀಗೆ ಅಶುಭ ನುಡಿಯಬೇಡ. ನನಗೆ ಎಷ್ಟು ವೇದನೆಯಾಗುತ್ತಿದೆ ನೀನು ಬಲ್ಲೆಯಾ ?...... ಹೀಗೆ ನೀನು ಮಾತಾಡಬೇಡ."

ಸತ್ಯೇಂದ್ರ ಅವಳ ತಲೆಯನ್ನು ತನ್ನ ಹೃದಯದಲ್ಲಿಟ್ಟುಕೊಂಡ. ಅವಳ ತಲೆಯಮೇಲೆ ಕೈಯಾಡಿಸಿದ. ಆದರೂ ಸಾವಿತ್ರಿಯ ಕೋಪ ನೆತ್ತಿಗೇರಿತ್ತು. ಅವಳ ಮನಸ್ಸು ಅವಳ ಒಡಿತದಲ್ಲಿಯೇ ಇರಲಿಲ್ಲ. "ನೀವು ಏನೇ ಹೇಳಿರಿ. ನನಗೆ ಸಮಾಧಾನವಿಲ್ಲ......ನಾನೇನು ಅಂಥ ಅಪರಾಧ ಮಾಡಿದ್ದೇನೆ? .... ಅಯ್ಯೋ ನನ್ನದೇ ತಪ್ಪು! ನನಗೇ ಶಿಕ್ಷೆ !!.... ನನಗೆ ಹೊಡೆಯಲು ನಿಮ್ಮ ಕೈಗಳಾದರೂ ಹೇಗೆ ಮೇಲೆ ಬಂದವು? "

ಸಾವಿತ್ರಿ ಜೋರಾಗಿ ಬಿಕ್ಕಿಸಿ ಬಿಕ್ಕಿಸಿ ಅಳಹತ್ತಿದಳು.

" ಸಾವಿತ್ರಿ, ನನ್ನ ತಪ್ಪನ್ನು ಒಪ್ಪಿಕೊಳ್ಳುತ್ತೇನೆ.... ಇನ್ನು ಮುಂದೆ ಹೀಗೆ...."

"ಸಾಕು! ಸಾಕು! ಎಷ್ಟು ಸಲ ಅಂದಿರುವಿರಿ? ನನಗೆ ಈ ಸಂಸಾರವೇ ಬೇಡ. ನೀವೇನೋ ! ನಿಮ್ಮ ಬಳಗದವರೇನೋ !!..."

"ಸಾವಿತ್ರಿ!... ನಿನ್ನ ವಿರುದ್ಧವಾಗಿ ನಾನು ಹೀಗೆ ಮಾಡಲಿಲ್ಲ. ಏನೋ ತಾಯಿಯ ಕರುಳು!.... ನಮ್ಮ ಮದುವೆಯ ಸಂಬಂಧ ಅವಳಿಗೆ ಅಸಮಾಧಾನವಿತ್ತು. ಅವಳ ಸಮಾಧಾನವಾಗಬೇಕೆಂದು..."

"ಹೂಂ! ಇರಲಿ. ನಿಮ್ಮ ತಾಯಿಗಾಗಿ ನೀವು ಬೇಕಾದಷ್ಟನ್ನು ಮಾಡುವಿರಿ. ನನಗಾಗಿ....? "

ಸತ್ಯೇಂದ್ರನಿಗೆ ಹಳೆಯ ದಿನಗಳೆಲ್ಲ ಕಣ್ಣ ಮುಂದೆ ಹಾದವು. "ಸಾವಿತ್ರಿ!.... ನಿನ್ನ ಸಲುವಾಗಿ ನಾನು ಏನು ಮಾಡಿಲ್ಲ?? ಬಣ್ಣ ಬಣ್ಣದ ಪಾತರಗಿತ್ತಿಯನ್ನು ಮಾಸದಂತೆ ಮುಟ್ಟುವ ಹಾಗೆ ನಿನ್ನನ್ನು ನನ್ನ ಅಂಗೈಯಲ್ಲಿ ಸಲುಹಿದ್ದೇನೆ. ಎಷ್ಟು ಸಲ ನಿನ್ನ ಸಲುವಾಗಿ ಹಾತೊರೆದಿಲ್ಲ? ನೀನು ಬೇನೆಬಂದು ಮಲಗಿದಾಗ, ಎಷ್ಟುಸಲ ನಿನ್ನ ಸಲುವಾಗಿ ಓಡಾಡಿಲ್ಲ?.... ನಾವಿಬ್ಬರೂ ಪ್ರೀತಿಯಿಂದ ತಿರುಗಾಡಿದ ದಿನಗಳನ್ನೆಲ್ಲ ಈಗಾಗಲೇ ಮರೆತುಬ್ಬಿಯೇನು?

"ಹೂಂ! ಆ ಪಾತರಗಿತ್ತಿಯ ಸಕ್ಕ ಈಗ ಮುರಿದು ಬಿಟ್ಟಿದೆ! ಮನೆಯಲ್ಲಿ ಅವಳದೇನು ನಡೆಯುವುದು? ಅವಳದೇನು ಅಧಿಕಾರವಿದೆ ಈ ಮನೆಯಲ್ಲಿ?... ನಿಮ್ಮ ತಮ್ಮಂದಿರು ಕಾಲೇಜ ಅಭ್ಯಾಸಕ್ಕೆಂದು ಬಂದು ಜೈಸಿ ಹೋಡೀಬೇಕು! ನಾನು ಮಾತ್ರ ಅಡುಗೆಯವಳ ಹಾಗೆ ಒಲೆಯ ಮುಂದೆ ಕೂಡಬೇಕು. ನಿಮ್ಮ ತಮ್ಮಂದಿರಿಗೆ ಹೊಸ ಹೊಸ ಬಟ್ಟೆಗಳು! ನನಗೋ ಒಂದು ಹರಕು ಪತ್ತಲು!.... ಈ ದಿನ ಅವರದು ಹಬ್ಬವಿತ್ತೇ ಬಟ್ಟೆಯನ್ನು ತಂದುಕೊಡಲು? ಪ್ರತಿಯೊಂದು ಮಾತಿಗೂ ಹಣವಿಲ್ಲವೆಂದು ಹೇಳುವವರು, ಸಂಸಾರವನ್ನು ಸಾಗಿಸುವುದೇ ತ್ರಾಸವೆಂದು ಹೇಳುವವರು ಈಗ ಹೇಗೆ ಎಲ್ಲಿಂದ ತಂದಿರಿ ಹಣವನ್ನು?... ನಿಮಗೆ ನಾನೆಲ್ಲಿ ಬೇಕಾಗಿದ್ದೇನೆ?"

ಸಾವಿತ್ರಿ ಮತ್ತೆ ಮತ್ತೆ ಬಿಕ್ಕಿಸಿ ಅತ್ತಳು. ಸತ್ಯೇಂದ್ರ ಅವಳನ್ನು ಸಮಾಧಾನ ಮಾಡುತ್ತ ಹೇಳಿದ; "ಆ ಹಣ ನನ್ನದಲ್ಲ! ಅವ್ವನೇ ಕಳಿಸಿಕೊಟ್ಟಿದ್ದು."

"ಸುಮ್ಮನೇ ಏಕೆ ಸುಳ್ಳು ಬೊಗಳುವಿರಿ? ಈ ದಿನ ವಟಸಾವಿತ್ರಿ ಹಬ್ಬವಿದೆ! ಹಬ್ಬದ ದಿನವಾದರೂ ಸುಳ್ಳು ಮಾತನಾಡಬೇಡಿರಿ. ನನಗೆ ಈ ನಾಟಕವೇನು ತಿಳಿಯುವದಿಲ್ಲವೇ ?"

" ಸಾವಿತ್ರಿ, ಏನಾದರೂ ನುಡಿಯಬೇಡ. ಅನ್ಯಥಾ ಭಾವಿಸಿ ಮನಸ್ಸಿಗೆ ತ್ರಾಸ ಮಾಡಿಕೊಳ್ಳಬೇಡ. ನನ್ನ ಮನಸ್ಸು ನಿನಗೆ ತಿಳಿಯದೇ? ನಮ್ಮ ಪ್ರೇಮಪಿಪಾಸವನ್ನು ಈ ಮೂರೇ ವರುಷಗಳಲ್ಲಿ ಮರೆತು ಬಿಟ್ಟೆಯಾ?"

" ಆಗ ನಿಮಗೊಂದು ಹೆಣ್ಣು ಬೇಕಾಗಿತ್ತು! "

" ಸಾವಿತ್ರಿ, ಸಾವಿತ್ರಿ, ಏನಂದಿ? ಅಯ್ಯೋ, ನಾನು ಇಷ್ಟರ ಮಟ್ಟಿಗೇನೆ ಇರುವೆನೇ? ಎಂಥವಳು ನೀನು ? "

" ಏಕೆ? ಮತ್ತೆ ಹೊಡೆಯಬೇಕೆನ್ನುವಿರೇನು?.... ನಾನು ಏನು ಅಂದರೂ ನಿಮಗೆ ಸಹನೆಯಿಲ್ಲ. ಹೊಡೆಯಿರಿ! ನೀವು ಗಂಡಸರು ಎಂದು ನಿಮಗೆ ಇಷ್ಟು ದರ್ಪವೆ ??? "

" ಆಯಿತೇ ಸಾವಿತ್ರಿ. ನನ್ನ ಬಗ್ಗೆ ನಿನ್ನ ಭಾವನೆ ಇಷ್ಟೆ ಅಹುದಷ್ಟೆ?"

ಸಾವಿತ್ರಿಯ ಮಾತುಗಳನ್ನು ಕೇಳಿ ಸತ್ಯೇಂದ್ರನಿಗೆ ಅತ್ಯಂತ ಕಳವಳವಾಯಿತು. ಮದುವೆಯಾಗುವ ಮುನ್ನ ಸಾವಿತ್ರಿಯನ್ನು ಪ್ರೀತಿಸಿದುದು, ತಂದೆತಾಯಿಗಳ ವಿರುದ್ಧ ಅವಳನ್ನು ಲಗ್ನ ಮಾಡಿಕೊಂಡುದುದು ಎಲ್ಲವೂ ನೆನಪಾದುವು. ಸಾವಿತ್ರಿಯ ಮಾತುಗಳನ್ನು ಕೇಳಿ, ಅವನ ಕನಸಿನ ಗೋಪುರ ಒಮ್ಮೆಲೆ ಕಳಚಿ ಬಿದ್ದಂತಾಯಿತು. ಸಾಯಲಿರುವ ಹಾವನ್ನು ಬಡಿಗೆಯಿಂದ ಮತ್ತೆ ಕೆಣಕುವಂತೆ ಸಾವಿತ್ರಿ ಹೇಳಿದಳು. "ಅಹುದು!! ಗಂಡಸರು ನೀವು ಹಣಗಳಿಸುವಿರೆಂದು ಅಹಂಕಾರವಿದೆ. ಆದುದರಿಂದಲೇ ಮನೆಯಲ್ಲಿ ನಿಮ್ಮ ಆಟವನ್ನು ನಡೆಸುವಿರಿ... ಹೂಂ! ನಿಮ್ಮಂತೆ ನನಗೂ ಆ ಸಾಮರ್ಥ್ಯವಿದೆ !!...."

"ಸಾವಿತ್ರಿ! ಸಾವಿತ್ರಿ!" ಸತ್ಯೇಂದ್ರ ಅವಳ ಬಾಯಿಯನ್ನು ಗಟ್ಟಿಯಾಗಿ ಒಡಿದನು. ಅವಳು ಅವನಿಂದ ಕೊಸರಿಗೊಂಡಳು.

ದಡದಡನೆ ಮೆಟ್ಟಿಲುಗಳನ್ನಿಳಿದ ಸಪ್ಪಳವಾಯಿತು. ಆ ಧ್ವನಿ, ಸತ್ಯೇಂದ್ರನ ಹೃದಯದಲ್ಲಿ ಪ್ರತಿಧ್ವನಿ ಮಾಡಿತು!

ರಾತ್ರಿ ಬಾಲ್ಕನಿಯಲ್ಲಿ ನಿಂತು, ಏಕಾಕಿಯಾಗಿ ದಾದರದ ಸಮುದ್ರ ದಂಡೆಯ ಕಡೆಗೆ ಸತ್ಯೇಂದ್ರ ನೋಡಿದ. ವಿಶಾಲವಾದ ಸಮುದ್ರ! ವಿಶಾಲವಾದ ನಭೋಮಂಡಲ! ವಿಶಾಲವಾದ ನೆಲ! ಇಂಥ ಸುವಿಶಾಲವಾದ ಕ್ಷೇತ್ರದಲ್ಲಿ ಸತ್ಯೇಂದ್ರನನ್ನು ಪ್ರಿತಿಸುವ ಒಂದು ವ್ಯಕ್ತಿಯೂ ಇಲ್ಲವೆ?

ದಟ್ಟವಾದ ಕರಿ ಮೋಡಗಳು ಎಲ್ಲಿಂದಲೋ ಒಮ್ಮೆಲೇ ಕೂಡಿಕೊಂಡವು. ಚಳಕ್ಕನೆ ಝುಗಝುಗಿಸಿ ಮಿಂಚೊಂದು ಸುಳಿಯಿತು!

ಸತ್ಯೇಂದ್ರನ ದೇಹವೆಲ್ಲ ನಡುಗಿತು! ಮನಸ್ಸು ಇಮ್ಮಡಿಯಾಗಿ ಅದುರಿತು.

( ೨ )

ಸತ್ಯೇಂದ್ರನ ಆಗಮನವು ಶಿವಲಿಂಗಯ್ಯನವರಿಗೆ ಅತ್ಯಂತ ಅಚ್ಚರಿಯನ್ನುಂಟುಮಾಡಿತು. ಸತ್ಯೇಂದ್ರನೇನೋ ಅವರ ಕೇವಲ ಮಿತ್ರ. ಮೊದಲಿನಿಂದಲೂ ಅವರಿಬ್ಬರೂ ಕೂಡಿ ಆಡಿದವರು. ಕಾಲೇಜದಲ್ಲಿಯೂ ಕೂಡಿ ಕಲಿತವರು. ನೌಕರಿಗಾಗಿ ಸತ್ಯೇಂದ್ರ ಮುಂಬಯಿಯನ್ನು ಸೇರಿದ್ದನು. ಶಿವಲಿಂಗಯ್ಯನವರು ವಕೀಲರಾಗಿ ಮಿರಜದಲ್ಲಿ ವಾಸವಾಗಿದ್ದರು. ಸತ್ಯೇಂದ್ರನ ಸ್ವಭಾವ ಶಿವಲಿಂಗಯ್ಯನವರಿಗೆ ಸಂಪೂರ್ಣವಾಗಿ ಗೊತ್ತು! ಪತ್ರ ಬರೆಯದಯೆ ತಿಳಿಸದೆಯೆ ಎಂದೂ ಅವನು ಬರುವವನಲ್ಲ. ಆದರೆ ಆದಿನ ಒಮ್ಮಿಂದೊಮ್ಮೆಲೆ ಮಟಮಟ ಮಧ್ಯಾಹ್ನದ ರೈಲಿಗೆ, ಸತ್ಯೇಂದ್ರ ಬಂದದ್ದು ನೋಡಿ, ಶಿವಲಿಂಗಯ್ಯನವರಿಗೆ ಬಹಳ ಆಶ್ಚರ್ಯವಾಯಿತು.

ಸತ್ಯೇಂದ್ರ ಬಂದವನೇ "ಮೈಯಲ್ಲಿ ಚನ್ನಾಗಿಲ್ಲ. ಮಲಗಿಕೊಳ್ಳುತ್ತೇನೆ" ಎಂದ. ಆದರಾತಿಥ್ಯದ ಉಪಚಾರವೆಲ್ಲ ಮುಗಿದ ಮೇಲೆ ಶಿವಲಿಂಗಯ್ಯನವರು "ಪ್ರವಾಸದ ದಣಿವು ಆಗಿರಬೇಕು. ಮಲಗಿಕೋ" ಎಂದು ಹೇಳಿ ಸತ್ಯೇಂದ್ರನಿಗೆ ಒಂದು ಕೋಣೆಯಲ್ಲಿ ವ್ಯವಸ್ಥೆ ಮಾಡಿಕೊಟ್ಟು ಹೋದರು.

ಮರುದಿನ ಬೆಳಗಿನಲ್ಲಿ ಎಷ್ಟು ವೇಳೆಯಾದರೂ ಸತ್ಯೇಂದ್ರ ಏಳಲಿಲ್ಲ. ಶಿವಲಿಂಗಯ್ಯನವರು ಅವನನ್ನು ಎಬ್ಬಿಸಹೋದಾಗ, ಸತ್ಯೇಂದ್ರನಿಗೆ ಮೈಯಲ್ಲಿ

ಚೆನ್ನಾಗಿಲ್ಲವೆಂದು ತಿಳಿದು ಬಂದಿತು. ಸತ್ಯೇಂದ್ರನಿಗೆ ಮೈಯಲ್ಲಿ ಉರಿ. ಡಾಕ್ಟರರನ್ನು ಕರೆದುಕೊಂಡು ಬಂದು ತೋರಿಸಿದರು. ಔಷಧ ಸಾಗಿತು.

ಒಂದು ದಿನವಾಯಿತು, ಎರಡು ದಿನವಾಯಿತು, ಮೂರು ದಿನವಾಯಿತು! ಸತ್ಯೇಂದ್ರ ತನ್ನ ಸುದ್ದಿ ಏನೂ ಹೇಳಲಿಲ್ಲ. ಶಿವಲಿಂಗಯ್ಯನವರೇ ಕೇಳಿದರು. "ಸತ್ಯೇಂದ್ರ ರಜೆ ಎಷ್ಟು ದಿನವಿದೆ ನಿನಗೆ? ಏನಾದರೂ ಸೆಕ್ರೆಟರಿಯೇಟಿಗೆ ಮುಂಬೈಗೆ ಕಾಗದ ಬರೆಯಲೇನು?"

"ಬೇಡ. ನಾನು ನೌಕರಿ ಬಿಟ್ಟು ಬಿಟ್ಟಿದ್ದೇನೆ...."

ಶಿವಲಿಂಗಯ್ಯನವರು ಚಕ್ಕನೆ ಚಕಿತರಾದರು! "ಇದೇನು ಹೇಳುವಿ ಸತ್ಯೇಂದ್ರ?" ಎಂದು ಕೇಳಿದರು.

"ಕಾರಕೂನಕಿ—ಸೊಟ್ಟ ನೌಕರಿ ತೆಗೆದುಕೊಂಡು ಏನು ಮಾಡಬೇಕು?......ಬಿಟ್ಟುಬಿಟ್ಟೆ!"

ಅವನ ಬೇನೆಯಲ್ಲಿ ಹೆಚ್ಚಿಗೆ ಮಾತನಾಡಬಾರದೆಂದು ಶಿವಲಿಂಯ್ಯನವರು ವಿಚಾರಿಸಿ, ಅದರ ಬಗ್ಗೆ ಪ್ರಸ್ತಾಪ ಎತ್ತಲಿಲ್ಲ. ಅವರು ಕೇಳಿದರು "ನಿನ್ನ ಹೆಂಡತಿಗೆ ಏನಾದರೂ ಪತ್ರ ಬರೆದು ತಿಳಿಸಲೇನು?"

"ಹಾಂ!" ಎಂದು ಸತ್ಯೇಂದ್ರ ಚೀರಿಕೊಂಡನು. "ಈ ವಿಶಾಲವಾದ ಜಗತ್ತಿನಲ್ಲಿ ನನಗೆ ಯಾರು ಇದ್ದಾರೆ!" ಸತ್ಯೇಂದ್ರ ಪುನಃ ಪುನಃ ಅದೇ ವಾಕ್ಯ ಅಂದನು. "ಅದನ್ನು ನೋಡಲೆಂದೇ ನಿನ್ನಲ್ಲಿಗೆ ಬಂದೆ! ಏನೋ ನಿನ್ನ ನೆನಪಾಯಿತು ಬಂದೆ!......ನೀನಾದರೂ ನನಗೆ ಇರುವೆಯಲ್ಲವೆ?"

ಸತ್ಯೇಂದ್ರನಿಗೆ ಏನೋ ಮನಸ್ಸಿನಲ್ಲಿಯೂ ಚೆನ್ನಾಗಿಲ್ಲವೆಂದು ಶಿವಲಿಂಗಯ್ಯನವರಿಗೆ ಅನಿಸಿತು. ಅವನ ಸಲುವಾಗಿ ಕನಿಕರಬಟ್ಟು, ಅವನ ಹೆಂಡತಿಯ ವಿಳಾಸವನ್ನು ದೊರಕಿಸಿ ಅಲ್ಲಿಗೆ ಪತ್ರ ಬರೆದರು. ಯಾರಿಂದಲೂ ಏನೂ ಉತ್ತರ ಬರಲಿಲ್ಲ. ಸತ್ಯೇಂದ್ರ ಅವರಲ್ಲಿಗೆ ಬಂದು ಒಂದು ತಿಂಗಳಾದರೂ ಅವರ ಬಳಗದವರಿಂದ ಏನೂ ಮಾರುತ್ತರ ಬರಲಿಲ್ಲ.

ಶಿವಲಿಂಗಯ್ಯನವರ ಹೆಂಡತಿ ಪಾರ್ವತೀದೇವಿ ಅತಿಥಿ ಸತ್ಕಾರ ಮಾಡಿ ಬೇಸತ್ತಳು. "ಬಳಗದವರೇ ಚಿಂತಿಸುವದಿಲ್ಲವೆಂದಮೇಲೆ ನಾವಾದರೂ

ಏನು ಮಾಡುವುದು....? ನಮಗಾದರೂ ಲಕ್ಷ್ಮಿ ಘುಕ್ಕಟೆಯಾಗಿ ಸಿಕ್ಕಿಲ್ಲ.... ನಾವು ಹೆಂಗಸರು ಎಷ್ಟೆಂದು ದುಡಿಯಬೇಕು? ” ಹೆಂಡತಿಯ ಈ ಅನೇಕ ಪ್ರಶ್ನೆಗಳಿಗೆ ವಕೀಲರಿಗೆ ಉತ್ತರ ಕೊಡುವುದು ದುಃಸಾಧ್ಯವಾಯಿತು. ಸತ್ಯೇಂದ್ರನನ್ನು ಹೊರಗಟ್ಟಬೇಕೆ? ಮನೆಯಲ್ಲಿಟ್ಟುಕೊಳ್ಳಬೇಕೆ? ಇದೊಂದು ದೊಡ್ಡ ಪ್ರಶ್ನೆಯೆ ಆಯಿತು.

ಶಿವಲಿಂಗಯ್ಯನವರು ಇದೇ ವಿಚಾರದಲ್ಲಿರುವಾಗ ಡಾಕ್ಟರರು ಹೇಳಿದರು: “ಇವರದು ಸಾಮಾನ್ಯ ಜ್ವರವಲ್ಲ. ಕ್ಷಯದ ಲಕ್ಷಣ ಇದೆ” ಎಂದರು.

ಪತಿಯ ಮುಖಾಂತರ ಪಾರ್ವತೀದೇವಿ ಈ ಮಾತನ್ನು ಕೇಳಿದ ಕೂಡಲೇ ಹೌಹಾರಿದಳು! ಸತ್ಯೇಂದ್ರನನ್ನು ಹೇಗಾದರೂ ಮಾಡಿ ಹೊರಗಿಡಲು ಆಜ್ಞೆ ಮಾಡಿದಳು.

ಗೆಳೆಯನ ಆತಿಥ್ಯಕ್ಕೆ ಮುಕ್ತಾಯವಾಯಿತು! ವಕೀಲರು ಕ್ಷಯರೋಗದ ಡಾಕ್ಟರರಿಗೆ ಭೆಟ್ಟಿಯಾದರು. ದವಾಖಾನೆಯಲ್ಲಿ ಪ್ರತ್ಯೇಕ ವ್ಯವಸ್ಥೆ ಮಾಡಿದರು. ಸತ್ಯೇಂದ್ರ ಹೇಳಿದ: ನನಗೇನೂ ಆಗಿಲ್ಲ....” ಎಂದು. “ಈ ವಿಶಾಲವಾದ ಜಗತ್ತಿನಲ್ಲಿ ನನ್ನನ್ನು ಹಚ್ಚಿಕೊಳ್ಳುವವರು ಒಬ್ಬರೂ ಇಲ್ಲವೆ?” ಎಂದು ಕೇಳಿದ.

* * * * * *

“ನರಳಬೇಡ ಮಗೂ! ”

ತಾನು ಇಷ್ಟು ದೊಡ್ಡವನಾದರೂ ‘ಮಗೂ’ ಎಂದು ಕರೆಯುವವರು ಯಾರು? ಕರು ಗೋವಿನ ಕರೆಗೆ ಕಿವಿಗೊಟ್ಟು ಕೇಳುವಂತೆ, ಸತ್ಯೇಂದ್ರನ ಕರ್ಣಪಟಲಗಳಾಗಿದ್ದವು. ಜ್ವರದ ತಾಪವಿದ್ದರೂ, ಮನಸ್ಸು ಅವಳಿಗೆ ಬಾಗಿತು.

“ಅವ್ವ, ನನ್ನದು ತಪ್ಪಾಯಿತು....”

“ಇರಲಿ ಮಗು. ನಿನ್ನ ತಪ್ಪು ಒಪ್ಪು ಆಮೇಲೆ ಹೇಳುವಿಯಂತೆ! ನಿನ್ನ ಜಡ್ಡು ಗುಣವಾಗಲಿ. ವಕೀಲರು ಬರೆದ ಪತ್ರ ನನ್ನ ಕೈಗೆ ಬೇಗ ಸಿಕ್ಕಲಿಲ್ಲ.

ಅದನ್ನು ಓದಿಸಿದ ಕೂಡಲೆ, ನನ್ನ ಜೀವ ನಿಲ್ಲುವ ಹಾಗೆ ಆಗಲಿಲ್ಲ. ಇವರು ಬರಲಿ ಬಿಡಲಿ. ನಾನು ಹೊರಟೇ ಬಂದೆ!...."

ರಂಗೂತಾಯಿಯವರು ಇನ್ನೂ ಏನೇನೋ ಹೇಳುತ್ತಿದ್ದರು. ತಾಯಿಯ ಧ್ವನಿ, ತಾಯಿಯ ಅಭಯ ಹಸ್ತ ಸತ್ಯೇಂದ್ರನಿಗೆ ಅಪರಿಮಿತ ಆನಂದ ಕೊಡುತ್ತಿದ್ದವು. ಈ ಆನಂದದ ಚಿತ್ರದ ಜೊತೆಗೇ ತಾನು ಅವರ ಸಂಗಡ ಜಗಳ ಆಡಿದ ಚಿತ್ರವೂ ಕಣ್ಣಮುಂದೆ ನಿಲ್ಲುತ್ತಿತ್ತು.

ಅಹುದು! ಅದು ಆ ವರುಷದ ಹಿಂದಿನ ಮಾತು. ಹಿರಿಯ ಮಗನಾದ ಸತ್ಯೇಂದ್ರ ಬಿ. ಎ. ದಲ್ಲಿ ತೇರ್ಗಡೆಯಾಗುವದಕ್ಕಿಂತ ಮೊದಲೇ, ಅವನ ತಂದೆತಾಯಿಗಳು ಅವನಿಗಾಗಿ ಒಂದು ಕನ್ಯೆಯನ್ನು ನೋಡಿದ್ದರು. ಸತ್ಯೇಂದ್ರ ತಮ್ಮ ಊರಾದ ಲಕ್ಷ್ಮೇಶ್ವರದಲ್ಲಿಯೇ ಉಳಿಯಬೇಕು. ಅಲ್ಲಿಯೇ ವಕೀಲಿಯನ್ನಾಗಲಿ ಅಥವಾ ಮಾಸ್ತರಕಿಯನ್ನಾಗಲಿ ಮಾಡಬೇಕು. ತಮ್ಮ ಕಣ್ಣೋಟದಲ್ಲಿಯೆ ತಮ್ಮ ಹಿರಿಯಮಗನಿದ್ದುಕೊಂಡು, ತಮ್ಮ ಆಸ್ತಿಪಾಸ್ತಿಯ ಮೇಲ್ವಿಚಾರಣೆ ಮಾಡಬೇಕೆಂದು ಸತ್ಯೇಂದ್ರನ ತಂದೆಯವರು ವಿಚಾರಿಸಿದ್ದರು. ಸತ್ಯೇಂದ್ರ ತಮ್ಮ ಮಾತುಗಳನ್ನು ಎಂದೂ ಮೀರುವದಿಲ್ಲವೆಂದು ಅವರು ತಿಳಿದುಕೊಂಡಿದ್ದರು. ಅಂತೆಯೆ ಕನ್ಯೆಯ ತಂದೆಯವರಾದ ರಾಮರಾಯಗೆ, ಬೀಗತನದ ಬಗ್ಗೆ ಸಂಪೂರ್ಣ ವಚನವನ್ನು ಕೊಟ್ಟಿದ್ದರು. ಸತ್ಯೇಂದ್ರ ಆ ವಚನ ಭಂಗ ಮಾಡಿಸಿದ. ಖಡ್ಗವನ್ನು ಹಿರಿದು ಮೈತುಂಬ ಗಾಯಮಾಡಿದಂತೆ ಅವನ ತಂದೆಯವರಿಗಾಯಿತು. ಅವರ ಕೋಪದ ಪೆಟ್ಟಿಗೆ, ಸತ್ಯೇಂದ್ರ ಅಲ್ಲಿ ನಿಲ್ಲದೆ ಮುಂಬೈಗೆ ಓಡಿಹೋಗಿಬಿಟ್ಟನು. ಸೆಕ್ರೆಟರಿಯೇಟದಲ್ಲಿ ಕಾರಕೂನ ಸ್ಥಳವನ್ನು ದೊರಕಿಸಿ, ತನ್ನ ಕಾಲಮೇಲೆ ತಾನು ನಿಂತನು. ಸತ್ಯೇಂದ್ರ ಮುಂಬೈಗೆ ಹೋದಂದಿನಿಂದ, ಅವನ ತಂದೆಯವರು ಅವನ ಆಶೆಯನ್ನೇ ಬಿಟ್ಟುಬಿಟ್ಟರು. ಅವನಿಗೆ ಯಾವ ರೀತಿಯ ನೆರವನ್ನೂ ಕೊಡಲಿಲ್ಲ. ಇಷ್ಟೇ ಅಲ್ಲದೆ, ತಮ್ಮ ಹೆಂಡತಿ ರಂಗೂತಾಯಿಗೂ ಪ್ರತಿಬಂಧಿಸಿದರು.

ಎಲ್ಲರಿಂದಲೂ ತ್ಯಕ್ತನಾದ ಸತ್ಯೇಂದ್ರನು ಮುಂಬಯಿಯಲ್ಲಿ ಓಡಾಡುತ್ತಿರುವಾಗ, ಸಾವಿತ್ರಿಯ ಸ್ನೇಹಹಸ್ತ ದೊರಕಿತು. ಅವಳು ಪಾತರಗಿತ್ತಿಯಂತೆ

ಹೂವಿನಿಂದ ಹೂವಿಗೆ ಹಾರುತ್ತಿದ್ದಳು, ಅವಳ ಓಡಾಟ ಅಷ್ಟು ಮಾಟವಾಗಿತ್ತು! ಪರಿಚಯವಾಗಲು, ಪ್ರೀತಿಸಲು ಯೌವನದಲ್ಲಿ ಏನುಬೇಕು? ಟ್ರೈಲಿನಲ್ಲಿ ಸ್ಥಳ ಕೊಡುವುದು, ಒಂದು ಕಪ್ ಚಹ ಕೊಡುವುದು, ತರುವಾಯ ಮಾತುಕತೆ-ಕೊನೆಗೆ ಲಗ್ನ!! ಸತ್ಯೇಂದ್ರ ಮತ್ತು ಸಾವಿತ್ರಿಯರ ಮದುವೆ ಹೀಗೆಯೇ ಆಯಿತು. ತಮ್ಮದೊಂದು ಆದರ್ಶ ಪ್ರೇಮ ವಿವಾಹವೆಂಬ ಹುಮ್ಮಸ್ಸಿನಲ್ಲಿ ಅವರಿಬ್ಬರೂ ಮುಂಬಯಿಯಲ್ಲಿಯೇ ಲಗ್ನವಾದರು. ಮಾವ ಬಂಧು ಬಳಗದವರೂ ಅವರ ಸಮಾರಂಭಕ್ಕೆ ಬರಲಿಲ್ಲ.

ಆದರೆ ಮದುವೆಯಾದ ಮೂರು ವರುಷಗಳಲ್ಲಿಯೆ ಸತ್ಯೇಂದ್ರನ ಹರುಷವು ಅಡಗಿತು! ಹೀಗೇಕೆ? ಹೀಗೇಕೆ?? ನೂರು ಸಲ ವಿಚಾರಿಸಿದನು. ಚಳಕ್ಕನೆ ಮಿಂಚು ಸುಳಿದಂತಾಗಿ ಅವನ ಮೈ ನಡುಗಹತ್ತಿತು.

" ಮಗೂ, ಹೀಗೆ ನಡುಗಬೇಡ! ದೇವರು ನಿನಗೆ ಹಿತ ಮಾಡುವನು " ರಂಗೂತಾಯಿಯವರ ಮಾತು ಕೇಳಿ ಮನಸ್ಸಿಗೆ ಏನೋ ಶಾಂತವೆನಿಸುತ್ತಿತ್ತು. "ಅವ್ವ, ನಾನು ಎಷ್ಟು ದಿನ ಹೀಗೆ ಮಲಗಬೇಕು? ನನ್ನ ಜಡ್ಡು ಎಂದು ಗುಣವಾಗುವುದು?"

"ಸತ್ಯೇಂದ್ರ, ಅವಳು ಏಕೆ ಬಂದಿಲ್ಲ? ಸಾವಿತ್ರಿ ಬಂದರೆ ನಿನಗೆ ಬೇಗ ಗುಣವಾಗುವುದು!"

"ಹಾಂ ! ಏನಂದೀ?" ಸತ್ಯೇಂದ್ರ ಸ್ವಲ್ಪ ಕಿರಿಚಿಕೊಂಡನು. "ಅವ್ವ, ನೀನು ಬಂದಿರುವಿಯಲ್ಲ, ಸಾಕು ನನಗೆ ಅಷ್ಟು!"

"ಮಗೂ, ನಾನೇನು ಕೊನೆಯವರೆಗೆ ಇರುವವಳೆ?"

"ಅಂದರೆ ನೀನು ನನ್ನನ್ನು ಬಿಡುವೆಯಾ?"

"ಇಲ್ಲ ಸತ್ಯೇಂದ್ರ ಕೊನೆಯವರೆಗೆ ಇರುವವಳು ಸಾವಿತ್ರಿ! ಅವಳು ಏಕೆ ಬಂದಿಲ್ಲ....?"

"ಹಾ!... ಅವ್ವ, ಆ ಮಾತನ್ನು ತೆಗೆಯಬೇಡ" ಸತ್ಯೇಂದ್ರ ಮತ್ತೆ ಕಿರಿಚಿಕೊಂಡನು.

ದಿನಗಳು ಹೋದಂತೆ, ದೊಡ್ಡ ದವಾಖಾನೆಯಲ್ಲಿ ಜೀವನವನ್ನು ಸಾಗಿಸುವುದು ಸತ್ಯೇಂದ್ರ ಮತ್ತು ರಂಗೂತಾಯಿಯವರಿಗೆ ಅಸಾಧ್ಯವಾಯಿತು. ಸತ್ಯೇಂದ್ರನು ತನ್ನ ಮಿತ್ರರೆಲ್ಲರನ್ನು ಪರೀಕ್ಷಿಸಿ ನೋಡಿದಂತಾಗಿತ್ತು. ಎಲ್ಲರೂ ಅವನಿಗೆ ಹಣದ ಸಹಾಯ ಸಲ್ಲಿಸಿ ಬೇಸತ್ತು ಹೋಗಿದ್ದರು. ಮುಂಬೈಯಲ್ಲಿ ಅವನ ಮನೆಯಲ್ಲಿದ್ದ ಅವನ ತಮ್ಮಂದಿರೂ ಸತ್ಯೇಂದ್ರನಿಗೆ ಸಹಾಯ ಮಾಡಲಿಲ್ಲ. ತಮ್ಮ ಅಣ್ಣನ ಹೆಂಡತಿಯ ದ್ವೇಷದಿಂದ, ಅವರು ಸತ್ಯೇಂದ್ರನ ಕಡೆಗೆ ಬರಲಿಲ್ಲ. ನೌಕರಿಯಿಲ್ಲ! ಹಣವಿಲ್ಲ! ಬಂಧುಬಳಗದವರ ನೆರವಿಲ್ಲ! ಮೇಲೆ ಮುಗಿಯದ ಬೇನೆಯೊಂದು!! ಸತ್ಯೇಂದ್ರನು ಸತ್ಯದ ಅಗ್ನಿಯಲ್ಲಿ ಬಿದ್ದು ಬೆಂದುಹೋದ.

ಕ್ಷಯದ ಚಿನ್ಹಗಳು ಹೆಚ್ಚು ಕಾಣಹತ್ತಿದಕೂಡಲೇ, ಸತ್ಯೇಂದ್ರನನ್ನು ದವಾಖಾನೆಯಿಂದ ದೂರವಾಗಿರಿಸಿ, ಊರ ಹೊರಗಿನ ಒಂದು ಕೋಣೆಯಲ್ಲಿ ವಾಸವಾಗಿರುವಂತೆ ವ್ಯವಸ್ಥೆ ಮಾಡಿದರು. ಡಾಕ್ಟರರು ಹೇಳಿದ ಚುಚ್ಚುಮದ್ದಿನ ಔಷಧಗಳನ್ನು ತರಲು ಹಣವಿರದೆ ಬಹಳ ತೊಂದರೆಯಾಗಹತ್ತಿತ್ತು.

ಸತ್ಯೇಂದ್ರ ಹೇಗೋ ದಿನಗಳನ್ನು ಕಳೆದ. ಒಂದೊಂದು ಸಲ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಅವನಿಗೆ ಅನಿಸುತ್ತಿತ್ತು!

ಆಕಸ್ಮಾತ್ತಾಗಿ ಅವನಿಗೆ ನೂರು ರೂಪಾಯಿ ಮನಿಯಾರ್ಡರ ಬಂದಿತು ಅಶಕ್ತನಾದ ಸತ್ಯೇಂದ್ರನು ಹಾಸಿಗೆಯಲ್ಲಿಯೇ ಮಲಗಿ, ಅದಕ್ಕೆ ಸಹಿಮಾಡಿದನು. ಅಂಚೆ ಪೇದೆಯವನಿಂದ ರೂಪಾಯಿಗಳನ್ನೇನೊ ಇಸಿದುಕೊಂಡ ! ತರುವಾಯ ಅವನ ಮುಖ ಬಹಳ ಬೆವರತೊಡಗಿತು. ಎರಡು ಫರ್ಲಾಂಗು ದೂರಿನಿಂದ ನೀರು ಹೊತ್ತು ತಂದ ರಂಗೂತಾಯಿ ಕೇಳಿದರು. "ಸತ್ಯೇಂದ್ರ, ಎಲ್ಲಿಯ ರೂಪಾಯಿ ಅವು?"

"ಇವು!!...." ಸತ್ಯೇಂದ್ರ ಅನುಮಾನದಿಂದ ಹೇಳಿದನು. ಅವನಿಗೆ ಮುಂದೆ ಏನು ಮಾತನಾಡಬೇಕೊ ತಿಳಿಯದು. ತಾಯಿಯ ಆಗ್ರಹಕ್ಕಾಗಿ ಸತ್ಯಸಂಗತಿಯನ್ನು ಹೇಳಬೇಕಾಯಿತು. ತನ್ನ ತಾಯಿಯನ್ನು ಸಮೀಪದಲ್ಲಿ

ಕೂಡಿಸಿಕೊಂಡು, "ಅವ್ವ, ನೀನು ನನ್ನನ್ನು ತಪ್ಪು ತಿಳಿದುಕೊಳ್ಳಬಾರದು. ನೀನು ನನ್ನನ್ನು ಬಿಟ್ಟು ಹೋಗಬಾರದು ಅಂದರೆ ಹೇಳುತ್ತೇನೆ" ಎಂದ.

ಎರಡು ವರ್ಷದ ಹಿಂದೆ ನಡೆದ ಸಂಗತಿಯನ್ನು ವಿವರಿಸಿ ಹೇಳಿದ ಸಾವಿತ್ರಿ ತನ್ನನ್ನು ಬಿಟ್ಟು ಬೇರೆಯಾಗಿ ನೌಕರಿ ಮಾಡಿಕೊಂಡು ಬಾಳಿರುವ ಸಂಗತಿ ಹೇಳಿದ. ಆ ಹಳೆಯ ಸಂಗತಿ ಹೇಳ ಹೇಳುತ್ತಿದ್ದಂತೆಯೆ ಕಣ್ಣುಗಳಲ್ಲಿ ಒಂದೆರಡು ಹನಿ ಉದುರಿದವು! .. ಇಷ್ಟೆಲ್ಲ ಆಗಲು ಏನು ಕಾರಣ? ಪ್ರೇಮವೆಂದರೆ ಬರಿ ಮೋಹವೆಂದು ತಿಳಿದ ಸಾವಿತ್ರಿಯೆ?.... ಅಲ್ಲ, ಕಲಿಯಲಿಕ್ಕೆಂದು ಮುಂಬೈಗೆ ಬಂದ ಆ ಇಬ್ಬರು ತಮ್ಮಂದಿರೆ?...ಅಲ್ಲ, ತನ್ನ ತಾಯಿ?

ಹಾಸುಗೆಯಲ್ಲಿಯೆ ಮಗ್ಗುಲಾಗಿ ನೋಡಿದನು. ಇದೆಲ್ಲ ಕೇಳಿ ರಂಗೂತಾಯಿ ಓಡಿಹೋಗುವಳೇನೋ ಎಂದು! ರಂಗೂತಾಯಿ ಸಿಟ್ಟಿಗೆದ್ದು ಓಡಿ ಹೋಗಲಿಲ್ಲ. ಸತ್ಯೇಂದ್ರನ ಸಮೀಪದಲ್ಲಿಯೆ ಬಂದು, ಅವನ ಹಣೆಯ ಮೇಲೆ ಕೈಯಿಟ್ಟು "ಮಗೂ ಇಷ್ಟಾದರೂ ಅವಳ ಮನಸ್ಸು ಬದಲಾಗಿದೆ!.... ನಿನ್ನ ಕಾಳಜಿ ತೆಗೆದುಕೊಳ್ಳದಿದ್ದರೆ ಅವಳ ಧರ್ಮ ಎಲ್ಲಿ ಉಳಿಯಿತು?" ಎಂದಳು.

"ಅವಳ ಧರ್ಮ ಎಲ್ಲಿ ಉಳಿಯಿತು?" ತಾಯಿಯು ನುಡಿದ ಆ ಮಾತುಗಳು ಸತ್ಯೇಂದ್ರನಲ್ಲಿ ಪ್ರತಿಧ್ವನಿಗೊಡುತ್ತಿದ್ದವು. ಸೋತು ಹಣ್ಣಾದ ಮನದಿಂದ ಆವನು ಹಾಸುಗೆಯಲ್ಲಿ ಬಿದ್ದುಕೊಂಡಿದ್ದ.

ಆಗ ರಾತ್ರಿ ಹತ್ತು ಗಂಟೆ! ಕಿಡಿಕೆಯೊಳಗಿಂದ ಟಣ್ಣನೆ ಇಬ್ಬರು ಜಿಗಿದರು! ಮೈಬಣ್ಣವೆಲ್ಲ ಕಪ್ಪು!! ............ ಅವರನ್ನು ನೋಡಿ ಸತ್ಯೇಂದ್ರ ಚಿಟ್ಟನೇ ಚೀರದ. ರಂಗುತಾಯಿಯವರಿಗೂ ಎಚ್ಚರಾಯಿತು. ಗಾಬರಿಯಲ್ಲಿ ಸತ್ಯೇಂದ್ರನನ್ನು ಅಪ್ಪಿಕೊಂಡರು. ಬಂದವರಿಬ್ಬರೂ ಹಾಸಿಗೆಯ ಬಳಿಯಲ್ಲಿರುವ ಪೆಟ್ಟಿಗೆಗೆ ಕೈಹಾಕಿದರು. ಅವರ ಹೊಂಚು ಸತ್ಯೇಂದ್ರನಿಗೆ ಕೂಡಲೇ ಹೊಳೆಯಿತು. ಏನೂ ಸಹಾಯವಿಲ್ಲದಾಗ, ಆ ನೂರು ರೂಪಾಯಿ ಅವನಿಗೆ ದೊರೆತಿದ್ದವು. ಕಸಿವಿಸಿಬಟ್ಟು ಅವರನ್ನು ಹಿಡಿಯಲು ಹೋದನು. ಸತ್ಯೇಂದ್ರನ ಬೇನೆಯದು ಅವರಿಗೇನು? ರುಮ್ಮನೇ ಒಂದೆರಡು ಏಟು

ಕೊಟ್ಟರು. ಮೇಲೆ ಥಳಿಸಿದರು. ತಾಯಿ ಚೀರಿಕೊಂಡಳು ! ಆಕ್ರೋಶ ಮಾಡಿದಳು ! ಸಮೀಪದಲ್ಲಿ ಯಾರ ಮನೆಗಳೂ ಇರಲಿಲ್ಲ. ಯಾರ ನೆರವೂ ಅವಳಿಗೆ ಇರಲಿಲ್ಲ.

ಒಂದು ಕ್ಷಣದಲ್ಲಿ ಆ ಕಳ್ಳರು ಕತ್ತಲೆಯಲ್ಲಿ ಮಾಯವಾಗಿ ಬಿಟ್ಟಿದ್ದರು ಆ ನೂರು ರೂಪಾಯಿ ದೊರೆತ ಸುದ್ದಿಯನ್ನು ಅವರು ಹೇಗೆ ಗೊತ್ತು ಹಚ್ಚಿದ್ದರೋ ! ಎಲ್ಲವೂ ವಿಚಿತ್ರ ಲೀಲೆ !

ರಂಗೂತಾಯಿಯವರು ಹೆಣವಾಗಿ ಬಿದ್ದ ಸತ್ಯೇಂದ್ರನನ್ನು ತೊಡೆಯ ಮೇಲೆ ತೆಗೆದುಕೊಂಡರು. ತಲೆಗೆ ಹೊಡೆತಬಿದ್ದು ರಕ್ತ ಸೋರುತ್ತಿತ್ತು. ಸತ್ಯೇಂದ್ರನಿಗೆ ಮೈಮೇಲೆ ಎಚ್ಚರವಿರಲಿಲ್ಲ. ಆ ದೇಹವನ್ನು ತಾನೇ ಹೊತ್ತುಕೊಂಡು ಮನೆಬಿಟ್ಟು ಹೊರಗೆ ಬಂದರು. ಆಕಾಶದಲ್ಲಿ ಮಳೆಗಾಲದ ಮೋಡಗಳು ಮುಸುಕಿಕೊಂಡಿದ್ದವು. ಎಲ್ಲ ಕಡೆಗೂ ಭೀಕರತೆ! ನಿರ್ಜನವಾದ ಓಣಿ ! ಯಾವುದರ ಎಚ್ಚರಿಕೆಯೂ ರಂಗೂತಾಯಿಯವರಿಗೆ ಇರಲಿಲ್ಲ.

ಆ ಕತ್ತಲೆಯಲ್ಲಿ ನಡೆದುಬಂದು, ಡಾಕ್ಟರರನ್ನು ಕೂಗಿದಳು. ಡಾಕ್ಟರರು ಬಾಗಿಲು ತೆರೆದು ನೋಡಿದರು ! ತೇಗುತ್ತಿರುವ ರಂಗೂತಾಯಿಯವರು! ನಿಶ್ಚೇಷ್ಟಿತನಾದ ಸತ್ಯೇಂದ್ರ !!

ಆಕಾಶದಲ್ಲಿ ಮಿಂಚು ಝುಗ್ಗನೆ ಸುಳಿಯಿತು. ಸತ್ಯೇಂದ್ರ ಒಮ್ಮೆಲೆ ಚಕಿತಚಿತ್ತನಾಗಿ ಕೇಳಿದ " ವಿಶಾಲವಾದ ಜಗತ್ತಿನಲ್ಲಿ ನನ್ನವರು ಯಾರು ? "

"ನಾನು !! " ಆ ಬೆಳಗಿನಲ್ಲಿ ಬಳ್ಳಿಯಂತೆ ಸುಳಿಯುತ್ತ ಬಂದು ಸಾವಿತ್ರಿ ಹೇಳಿದಳು.

" ನೀನು ? ? "

" ಹೂಂ ! .... ನನ್ನ ನೂರು ತಪ್ಪುಗಳನ್ನು ಕ್ಷಮಿಸಿ ಬಿಡಿ ಸತ್ಯೇಂದ್ರ. ನಿಮ್ಮ ತಾಯಿಯವರಿಗೂ ನನ್ನ ಮಾತನ್ನು ಮುಟ್ಟಿಸಿ. ದವಾಖಾನೆಯಲ್ಲಿ ನನ್ನ ಕೆಲಸವನ್ನು ಅವರು ಮಾಡುತ್ತಿದ್ದಾರೆ !! . ಇದನ್ನು ತಿಳಿದು ನನ್ನ ಮನ ನೋಯುತ್ತಿದೆ. ನಿಮ್ಮನ್ನು ನಾನು ಏಕಾಕಿಯಾಗಿ ಬಿಡಲಾರೆ! ಛೆ ! ಎಂಥ ತಪ್ಪು ನಾನು ಮಾಡಿದೆನಲ್ಲ ?? ........ ಹೊರಗಿನ ಕಣ್ಣಿಗೆ ಮೋಹ

ಮಾಡುವುದಷ್ಟೆ ಪ್ರೇಮವೆಂದು ನಾನು ತಿಳಿದಿದ್ದೆ. ಅಲ್ಲ, ಇದು ಶುದ್ಧ ತಪ್ಪಾಗಿದೆ!"

"ಸಾವಿತ್ರೀ, ನಿಜವಾಗಿಯೂ ನಿನಗೆ ಹೀಗೆ ಅನಿಸುವುದೇ?"

"ಅನಿಸುತ್ತದೆ. ನಾನು ಒಬ್ಬಳೇ ಬಾಳಲಾರೆ! ........ ಸತ್ಯದ ಅಗ್ನಿ ಕುಂಡದಲ್ಲಿ ಹಾರಿದರೂ ನಾವು ಪವಿತ್ರರಾಗಿ ತಲೆ ಮೇಲೆತ್ತಬೇಕು! ನಿಜವಾಗಿ ಪ್ರೇಮ ಕಷ್ಟಬಡುವುದರಲ್ಲಿದೆ!"

"ಸಾವಿತ್ರಿ, ನನ್ನ ಸಲುವಾಗಿ ನೀನು ಇಷ್ಟು ಚಿಂತೆಮಾಡುವೆಯಾ?"

"ಅಹುದು ಸತ್ಯೇಂದ್ರ!"

"ಸಾವಿತ್ರಿ, ಸಾವಿತ್ರೀ! ನಿನ್ನ ಮನಸ್ಸು ಇಷ್ಟು ಬದಲಾಗಿದೆಯೆ? ಅದು ಹೇಗೆ? ಅದು ಹೇಗೆ ಸಾವಿತ್ರಿ??"

"ಸತ್ಯೇಂದ್ರ! ವಡಸಾವಿತ್ರಿಯ ಹಬ್ಬ ಸಮೀಪವಿದೆ. ನಾನು ಯಾರನ್ನು ಪೂಜಿಸಲಿ? ......... ಇಕೋ, ಈ ಸಾವಿತ್ರಿಯು ನಿಮ್ಮ ಕಡೆಗೇ ಬರುತ್ತಿದ್ದಾಳೆ. ನನ್ನ ಧನದ ಅರ್ಪಣೆ ಈಗಾಗಲೇ ನಿಮಗೆ ಮುಟ್ಟಿದೆಯಲ್ಲವೆ?"

"ಸಾವಿತ್ರೀ!" ಎಂದು ಸತ್ಯೇಂದ್ರ ಚೀರಿದನು.

ಸಾವಿತ್ರಿ ಸತ್ಯೇಂದ್ರನ ಸೇವೆಗಾಗಿ ಅವನೆದುರು ನಿಜವಾಗಿಯು ಬಂದು ನಿಂತಿದ್ದಳು! ವಡಸಾವಿತ್ರಿಯ ಹಬ್ಬವು ಎರಡು ವರ್ಷಗಳಲ್ಲಿ ಅವಳ ಹೃದಯುವನ್ನು ಕಲುಕಿತ್ತು!

# ಕೊಳಲು ಉಳಿದಿದೆ.

## ಮಾತಿನ ತೆರೆ ಒಂದು

"ನೋಡಿ, ಜನರು ನನ್ನನ್ನು ನೋಡಿ ನಗುತ್ತಾರೆ! ಈ ಬಂಗಾರದ ಕೃಷ್ಣನ ಮೂರ್ತಿ ಇವಳ ಕೈಯಲ್ಲಿ ಯಾವಾಗಲೂ ಏಕೆ ಎಂದು ಕೇಳುತ್ತಾರೆ! ನನ್ನ ಹತ್ತಿರ ಇದು ಇರದಿದ್ದರೆ ನನಗೆ ಸಮಾಧಾನವೇ ಇಲ್ಲ. ಪ್ರತಿಯೊಂದು ಕಾರ್ಯವನ್ನು ಆರಂಭಿಸುವಾಗ ಈ ಮೂರ್ತಿಯನ್ನು ನೋಡಿಯೆ ಪ್ರಾರಂಭಿಸು ತ್ತೇನೆ. ಅದೇನೋ ನನಗೆ ಅದರಲ್ಲಿ ಅಚಲವಾದ ವಿಶ್ವಾಸವಿದೆ, ಶ್ರದ್ಧೆಯಿದೆ, ಭಕ್ತಿಯಿದೆ. ಇದನ್ನು ಅವರಿಗೆಲ್ಲ ಹೇಗೆ ಹೇಳಬೇಕು? ಇಷ್ಟು ಸುಶಿಕ್ಷಿತ ಮಹಿಳೆ! ಕಾಲೇಜದಲ್ಲಿ ಪ್ರಾಧ್ಯಾಪಕಿಯ ಕೆಲಸ ಮಾಡುವವಳು! ಇವಳಿಗೂ ಇಂಥ ಅಂಧ ಶ್ರದ್ಧೆಗಳು ಏಕೆ? ಎಂದು ಸಂಶಯ ವ್ಯಕ್ತಮಾಡುತ್ತಾರೆ ........ ನೋಡಿ, ನೀವೇ ವಿಚಾರಿಸಿ ........ "ಸಂಕಟ ಬಂದಾಗ ವೆಂಕಟರಮಣ" ಹೋಗಿ "ವೆಂಕಟರಮಣ ಬಂದಾಗಲೇ ಸಂಕಟವಾಗುವಂತೆ" ಈಗಿನ ಕಾಲ ........! ಇಂಥ ನಾಸ್ತಿಕರಿಗೂ ದೇವರಲ್ಲಿ ವಿಶ್ವಾಸವಿಡುವ ಕಾಲ ಬರಬಹುದೆಂದು ನನಗೆ ಅನಿಸುತ್ತದೆ. ಇದೂ ಒಂದು ಸಮಸ್ಯೆ, ಯಾವ ದೇವರನ್ನು ಪೂಜಿಸಬೇಕು ಎಂಬುದು. ನಾನು ಕೃಷ್ಣನನ್ನು ಪೂಜಿಸುವೆನಲ್ಲ! ಅದಕ್ಕೇ ಜನರು ನನ್ನನ್ನು ನೋಡಿ ನಗುತ್ತಿರಬಹುದು.?

"ರೀಟಾ, ನನಗೂ ಅದೇ ಪ್ರಶ್ನೆ ಕೇಳಬೇಕಿತ್ತು."

"ಹೂಂ! ನಾನು ರೀಟಾ ಅಲ್ಲ! ರಾಧಿಕಾ!! ನನ್ನ ತಂದೆ ಹಾಗೆಯೆ ನನಗೆ ಕರೆಯುತ್ತಿದ್ದರು."

"ನಾನೂ ರಾಧಿಕಾ ಎಂದೇ ಕರೆಯುವೆ. ಆದರೆ ನೀವು ಕ್ರಿಸ್ತರಾಗಿದ್ದು ಕೃಷ್ಣನನ್ನು ಹೇಗೆ ಪೂಜಿಸುವಿರಿ?"

"ನೋಡಿ, ಕ್ರಿಸ್ತ-ಕೃಷ್ಣ ಈ ಶಬ್ದಗಳಲ್ಲಿ ಭೇದವೇ ತೋರುವುದಿಲ್ಲ."

"ಓಹೋ! ಒಳ್ಳೇ ಭಾಷಾಶಾಸ್ತ್ರ!"

"ಹೂಂ! ಇದು ನನ್ನಷ್ಟಕ್ಕೆ ನಾನು ವಿಚಾರಮಾಡಿ ನೋಡಿದ್ದೇನೆ. ನನ್ನ ವಂಶದ ದೇವರನ್ನು ನಾನು ಪೂಜಿಸುತ್ತ ಬಂದಿಲ್ಲ. ನಾನು ಹಾಗೆ ಮಾಡುವುದಾದರೆ ಯಾವ ದೇವರನ್ನು ಪೂಜಿಸಬೇಕು? ಪ್ರೇಮವಿವಾಹ ವಿದ್ದಲ್ಲಿ ಈ ಸಮಸ್ಯೆ ಬರುವುದೇ! ನೋಡಿರಿ ನನ್ನ ತಂದೆ ಕ್ರಿಶ್ಚನ್! ನನ್ನ ತಾಯಿ ಕೊಂಕಣಿ ಬ್ರಾಹ್ಮಣಳು! ಇಬ್ಬರ ದೇವರು ಬೇರೆ ಬೇರೆಯೇ!"

"ಹಾಗಾದರೆ ........?"

"ಅದೇ! ನಾನ ಆಗಲೇ ನಿಮಗೆ ಹೇಳಿದೆನಲ್ಲ. ಅದೊಂದು ಅವ್ಯಕ್ತ ಭಾವನೆ ಮೂಡಿ ಬರುತ್ತದೆ. ಅದು ಹೇಗೋ ನಾನು ಹೇಳಲಾರೆ! ಭಾವನೆಯು ನಮಗೆ ದೇವರ ಸ್ವರೂಪವನ್ನು ಚಿತ್ರಿಸಿಕೊಡುತ್ತದೆ. ನೋಡಿ ನನ್ನ ಕತೆಯನ್ನೆ. ಈ ಊರಿಗೆ ನಾನು ಮೊದಲು ಬಂದಾಗ ನಾನು ಹೌಹಾರಿ ಹೋಗಿದ್ದೆ! ಆಗ ನನಗೆ ಇನ್ನೂ ಇಪ್ಪತ್ತು ವರ್ಷಗಳು ತುಂಬಿರಲಿಲ್ಲ! ನನ್ನ ಇಬ್ಬರು ಚಿಕ್ಕ ಚಿಕ್ಕ ತಂಗಿಯರನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದೆ! ಈ ಊರಿಗೆ ನಾನು ತೀರ ಅಪರಿಚಿತಳು. ಹೊಟ್ಟೆಗೆ ಗತಿಯಿರಲಿಲ್ಲ. ಯಾರ ನೆರವೂ ನಮಗೆ ಇರಲಿಲ್ಲ. ನನ್ನ ಕಾಲಮೇಲೆ ನಿಂತುಕೊಳ್ಳುವುದಲ್ಲದೆ, ನನ್ನ ಇಬ್ಬರು ತಂಗಿಯರನ್ನೂ ಜೋಪಾನ ಮಾಡಬೇಕಿತ್ತು! ಆಗ ಇದೇ ಸ್ಟೇಶನ್ ರಸ್ತೆಯಲ್ಲಿರುವ ಕ್ರಿಶ್ಚಿಯನ್ನರ ವಸತಿಗೃಹಕ್ಕೆ ಹೋದೆ. ಅವರೇನೋ ನನ್ನಲ್ಲಿ ವಿಶ್ವಾಸವಿಟ್ಟರು! ನನ್ನ ಮಾತುಗಳನ್ನು ನಂಬಿದರು! ಒಂದೇ ಜಾತಿಯವರೆಂದು ಮನ್ನಿಸಿ ನಮ್ಮನ್ನು ಬೆಳೆಯಿಸಿ ದೊಡ್ಡವರನ್ನಾಗಿ ಮಾಡಿದರು. ಶಿಕ್ಷಣ ಕೊಡಿಸಿದರು... ಆದರೆ ಈಗ ಅವರೇ ನಮ್ಮನ್ನು ಮಾತನಾಡಿಸುವುದಿಲ್ಲ."

"ಅದೇಕೆ? ಅವರ ಮರದ ನೆರಳಲ್ಲಿ ನೀವು ಬೆಳೆದವರಲ್ಲವೆ?"

"ಅಹುದು ಎಂದೂ ಹೇಳಬೇಕು, ಅಲ್ಲವೆಂದೂ ಹೇಳಬೇಕು. ದೇವರ ದಯೆಯ ನೆರಳಲ್ಲಿ ಬೆಳೆದಿದ್ದೇವೆ. ನಾನು ಎಲ್ಲಿ ಇದ್ದರೂ ಕೃಷ್ಣನ ಸ್ಮರಣೆ

ಬಿಟ್ಟಿಲ್ಲ. ಇದೇ ಈಗ ತೋರಿಸಿದ ಈ ಕೊಳಲು ಬಾರಿಸುವುದನ್ನು ಬಿಟ್ಟಿಲ್ಲ. ನಾನು ಬೇರೆ ದೇವರನ್ನು ಭಜಿಸುತ್ತಿದ್ದುದರಿಂದ ನಾನು ಅವರಿಂದ ದೂರವಾಗಿಡಲ್ಪಟ್ಟಿದ್ದೇನೆ. ಜನರು ಹೀಗೇಕೆ ತಿಳಿದುಕೊಳ್ಳಬೇಕು? ನನ್ನ ಸ್ನೇಹವನ್ನು ಏಕೆ ಮರೆಯಬೇಕು? ಮನುಷ್ಯನಿಗೆ ಪ್ರಸಂಗ ಹೀಗೆಯೆ ಬರುತ್ತದೆಂದು ಹೇಳಲು ಬರುವುದಿಲ್ಲ. ನಾವೇನು ಮೊದಲಿನಿಂದ ಹೀಗೆಯೆ ಕಷ್ಟಬಟ್ಟಿಲ್ಲ. ನನ್ನ ತಾಯಿಯನ್ನು ನೀವು ನೋಡಿರುವಿರಲ್ಲವೆ? ಅವಳು ಎಷ್ಟು ಮುದುಕಿಯ ಹಾಗೆ ಕಾಣುತ್ತಾಳೆ!"

"ಅವರಿಗೆ ಎಷ್ಟು ವಯಸ್ಸು ಈಗ ?"

"ಅಷ್ಟೆ, ೪೦-೪೫ ವರ್ಷಗಳಾಗಿರಬೇಕು. ಎಷ್ಟು ಬೇಗ ಅವಳ ಕೂದಲು ಬೆಳ್ಳಗಾಗಿವೆ! ಎಷ್ಟು ಬೇಗ ಮುದಿಕೆಯ ಹಾಗೆ ಕಾಣುತ್ತಾಳೆ! ಆದರೆ ಅವಳು ಮೊದಲು ಹೀಗೆ ಇರಲಿಲ್ಲ. ಕಾಲೇಜದಲ್ಲಿರುವಾಗ 'ಬ್ಯೂಟಿ ಆಫ್ ದಿ ಕಾಲೇಜ' ಎಂದು ಪ್ರಖ್ಯಾತಿ ಪಡೆದಿದ್ದಳು. ಇದೇ ಕಾಲೇಜದಲ್ಲಿ ಅವಳ ಶಿಕ್ಷಣವಾಗಿದೆ. ನನ್ನ ತಂದೆಯಂತೂ ಬಹಳ ಶ್ರೀಮಂತರು. ರಂಗೂನ ವಿಶ್ವವಿದ್ಯಾಲಯದ ಇಂಗ್ಲೀಷ ಪ್ರೊಫೆಸರ ಆಗಿದ್ದರು. ನಮ್ಮನ್ನು ಅತ್ಯಂತ ಅಕ್ಕರತೆಯಿಂದ ನೋಡಿಕೊಳ್ಳುತ್ತಿದ್ದರು. ನಮಗೆ ಎಳ್ಳಷ್ಟು ಕಷ್ಟವಾಗದಂತೆ ಅವರ ಲಕ್ಷ್ಯವಿರುತ್ತಿತ್ತು! ಆಗಿನ ನಮ್ಮ ಶ್ರೀಮಂತಿಕೆಯ ಥಾಟು ಎಷ್ಟು! ಮನೆಯಲ್ಲಿ ವೈಭವವೆಷ್ಟು! ದಿನಾಲು ಸಂಜೆ ನಮ್ಮ ತಂದೆ ಕೊಳಲು ಊದುತ್ತಿದ್ದರು. ಚಿಕ್ಕವರಾದ ನಾವು ಅಟ್ಟದ ಬಾಲ್ಕನಿಯಲ್ಲಿ ಕುಳಿತುಕೊಂಡು ರಂಗೂನದ ರಂಜಿತ ದೀಪಗಳನ್ನು ನೋಡುತ್ತಿದ್ದೆವು. ಏನೇನೋ ಕಲ್ಪನೆ ಮಾಡುತ್ತಿದ್ದೆವು. ನಮ್ಮ ತಂದೆ ನಮಗೆಲ್ಲ ಕೃಷ್ಣನ ಆಟದ ಲೀಲೆಗಳನ್ನು ಬಣ್ಣಿಸಿ ಹೇಳುತ್ತಿದ್ದರು. ಓ! ಆ ಕತೆಗಳು ಎಷ್ಟು ಹೃದಯಂಗಮವಾಗಿ ಇರುತ್ತಿದ್ದವು!! ಆ ದಿನಗಳನ್ನೆಲ್ಲ ನೆನೆದರೆ ಈಗ ಸಂಕಟವಾಗುತ್ತದೆ! ಮುಂಬರುವ ಕಷ್ಟಗಳ ಕಲ್ಪನೆ ನಮಗೆ ಆಗ ಇರಲಿಲ್ಲ."

"ರಾಧಿಕಾ, ಜೀವನ ಹಗಲು ರಾತ್ರಿಗಳಂತೆ!"

"ನೀವೆನ್ನುವುದು ನಿಜ. ಆದರೆ, ಹಗಲು ಇರುವಾಗ ರಾತ್ರಿಯ ವಿಚಾರ ಎಲ್ಲಿರುವುದು? ನೋಡಿ, ನನ್ನ ತಾಯಿ ಪಟ್ಟ ದುಃಖಗಳಿಗೆ ಎಣೆಯಿಲ್ಲ. ಅವಳು

ಸ್ವರ್ಗಲೋಕದಿಂದ ಇಲ್ಲಿಗೆ ಬಂದಂತೆ ಆಗಿದೆ! ಮನುಷ್ಯನಿಗೆ ಇಂಥ ಅನುಭವ ಗಳು ತೀರ ಕಡಮೆ."

"ಹುಂ! ಏನಂದಿರಿ? ಸ್ವರ್ಗಲೋಕದ ಪ್ರವಾಸ ಮಾಡಿ ಬಂದಿರುವೆ?"

"ಅಹುದು! ನಮ್ಮ ತಂದೆಗೆ ಜಡ್ಡು ಬಹಳಾಗಿತ್ತು! ಅವರು ದವಾಖಾ ನೆಯಲ್ಲಿದ್ದರು. ಆಗ........??"

## ಮಾತಿನ ತೆರೆ ಎರಡು

"ರಾಧಿಕಾ, ಇನ್ನು ನಾನು ಬಹಳ ದಿನ ಬದುಕಲಾರೆ! ನನ್ನ ಅಂತ ರಾತ್ಮ ಹಾಗೆ ಹೇಳುತ್ತಿದೆ! ಮಕ್ಕಳಲ್ಲಿ ನೀನೆ ಹಿರಿಯವಳು, ನೀನೆ ಎಲ್ಲ ನೋಡಿಕೊಂಡು ಹೋಗಬೇಕು...ರಾಧಿಕಾ ಏನು ಸಪ್ಪಳ ಅದು? ಏನು ಸಪ್ಪಳ?"

"ದಾದಾ, ಜಪಾನರ ದಾಳಿ ಆರಂಭವಾಗಿದೆ! ಉತ್ತರಕ್ಕೆ ಬಂದಿದ್ದಾರೆ! ಇಲ್ಲಿಯೂ ಬೇಗ ಬರಬಹುದು. ಅದಕ್ಕೇ ಏಯರ ರೇಡ್ ಪ್ರಯೋಗ ನಡೆಸಿದ್ದಾರೆ!"

"ರಾಧಿಕಾ, ಎಂಥ ಗಂಡಾಂತರ! ನಡುನೀರಿನಲ್ಲಿಯೆ ನಿಮ್ಮನ್ನು ಕೈಬಿ ಡುವೆನೇನೋ ಎನಿಸುತ್ತಿದೆ. ನೀವು ಹೇಗೆ ಸುಖವಾಗಿ ಬಾಳಬೇಕು? ಅಯ್ಯೋ!........ ರಮಾ ರಂಗೂನದಿಂದ ಬಂದಳೆ?"

"ಇನ್ನೂ ಇಲ್ಲ ದಾದಾ. ಅವಳ ಪತ್ರ ಬಂದಿದೆ. ಬೇಗನೆ ಬರಬಹುದು!"

"ಓ! ಈ ಯುದ್ಧದಲ್ಲಿ ಬ್ಯಾಂಕಿನೊಳಗಿನ ಹಣವೆಲ್ಲ ದಿವಾಳಿಯಾಗಬ ಹುದು! ಬೇಗ ಎಲ್ಲ ತೆಗೆದುಕೊಂಡು ಬಂದರೆ.......?? ನೀವು ನಿರ್ಗತಿಕರಾಗಿ ಓಡಾಡವುದು ನೋಡಲಾರೆ! ಹಣವು ಬೇಗ ಬಂದರೆ ?"

"ದಾದಾ ಚಿಂತೆ ಮಾಡಬೇಡ. ಇಂದೆ ಆರು ಸಾವಿರ ರೂಪಾಯಿ ಕಳಿ ಸಿದ್ದಾಳೆ."

"ಹೇಗೋ!........ ಇನ್ನೂ ಮೂವತ್ತು ಸಾವಿರ ರೂಪಾಯಿ ಇವೆ! ಅವೆಲ್ಲ ಕೈಗತವಾದರೆ?... ನಾನು ನೆಟ್ಟಗಿದ್ದರೆ ನಾನೇ ಹೋಗಿಬರುತ್ತಿದ್ದೆ!...

ಪಾಪ! ರಮಾಳಿಗೆ ಎಷ್ಟು ತ್ರಾಸಾಗಿದೆಯೋ ಏನೋ!........ ಆಯ್ಯೋ!... ರಮಾ ಬಂದಿದ್ದರೆ ಒಂದು ಮಾತು ಹೇಳಬೇಕೆಂದಿದ್ದೆ ರಾಧಿಕಾ. ನಾನು ಮರಳಿ ರಂಗೂನಕ್ಕೆ ಹೋಗುವೇನೋ ಇಲ್ಲವೋ!.... ರಮಾ ನನ್ನನ್ನು ಭೆಟ್ಟಿಯಾಗುವಳೋ ಇಲ್ಲವೋ!.... ನಿನ್ನೆದುರಿಗೆ ಎಲ್ಲ ಹೇಳಿಬಿಡುವೆ!"

"ಹೇಳು ದಾದಾ, ಅವಳೂ ಬೇಗ ಬರಬಹುದು! ಅವಳಿಗೂ ನಾನು ಹೇಳುವೆ. ಆದರೆ, ನೀನು ಸಾಯುವ ಮಾತನಾಡಬೇಡ, ದಾದಾ. ನಾನು ಅದನ್ನು ಯಾವ ಕಿವಿಗಳಿಂದ ಕೇಳಲಿ?"

"ಛೀ, ಹುಚ್ಚಿ ಹೆದರಬೇಡ, ಅಳಬೇಡ........ ಈ ಕೃಷ್ಣನ ಮೂರ್ತಿ ತೆಗೆದುಕೋ! ಈ ಕೊಳಲು ತೆಗೆದುಕೊ! ಇದನ್ನು ಬಾರಿಸಲು ಕಲಿತುಕೊ. ನಿನಗೆ ಅಪಾರ ಆನಂದವಾಗುವುದು! ಈ ಕೃಷ್ಣನನ್ನು ಸ್ಮರಿಸಿ ನೀನು ಕೆಲಸವನ್ನು ಮಾಡು. ನಿನಗೆ ಜಯದೊರೆಯುವುದು! ರಾಧಿಕಾ, ನನ್ನ ಮಾತುಗಳನ್ನು ನಂಬು. ನನ್ನ ತಂದೆಯು ನನಗೆ ಇದನ್ನು ಹೇಳಿದರು.... ಅವರ ಮಾತಿನಂತೆ ನಡೆದುಕೊಂಡು ಬಂದೆ. ಆದರಿಂದಲೆ ನನಗೆ ಅಪರಿಮಿತ ಶ.ಂತಿ!.... ರಾಧಿಕಾ, ನನ್ನದೊಂದು ಆಶೆ ಇದೆ. ಅದನ್ನು ರಮಾಳಿಗೆ ಹೇಳು. ಅದನ್ನು ಪೂರೈಸಬೇಕೆಂದು ತಿಳಿಸು. ಅದು ನನ್ನ ತಂದೆಯುದೇ ಆಗಿತ್ತು ನನ್ನದೂ ಆಗಿದೆ...."

"ಯಾವುದು ದಾದಾ? ನಿನ್ನ ಆಶೆ ಪೂರೈಸದಿದ್ದರೆ ನಾವು ಬಾಳುವುದಾದರೂ ಏತಕ್ಕೆ?"

"ರಾಧಿಕಾ, ನೀನು ಬಹಳ ಒಳ್ಳೆಯ ಮಗಳು ಇರುವಿ! .... ನೋಡು, ಬಂಗಾಲದ ಸಾಗರದ ಆಲೆಗಳನ್ನು ದಾಟಿ ಹೋಗಿರಿ. ಮದ್ರಾಸು, ಮೈಸೂರು ಸೀಮೆಗಳನ್ನು ದಾಟಿದಮೇಲೆ ಮಲೆನಾಡ ಸೆರಗು ಹತ್ತುವುದು. ಅಲ್ಲಿ ಸಪ್ತಾಪುರದ ಆಚೆ ನಿಸರ್ಗದೇವತೆಯ ಸುಂದರವಾದ ಬೀಡು ಇದೆ. ಭೂಮಿಯ ಗರ್ಭಿಣಿ ಮಹಿಳೆಯ ಹಾಗೆ ಹಸಿರು ಸೀರೆಯನ್ನು ಉಟ್ಟಂತೆ ಕಂಗೊಳಿಸುತ್ತದೆ. ತುಸು ಎತ್ತರವಾದ ಎರಡು ಬೆಟ್ಟಗಳು ಪ್ರೀತಿಯಿಂದ ಕೈಕುಲುಕಬೇಕೆಂದು ಹಾತೊರೆದು ಮುಂದೆ ಬರುತ್ತಿರುವವೇನೊ ಎಂಬಂತೆ ತೋರು

ತ್ತಿವೆ. ಇವೆರಡರ ಅಂಚುಗುಂಟ ಸುವಿಶಾಲವಾದ ಕೆರೆ. ಪ್ರಕೃತಿದೇವಿಯ ಕಾಲು ತೊಳೆದು ಪವಿತ್ರನಾಗಿರುವೆನೆಂಬ ಹೆಮ್ಮೆ ಆ ಕೆರೆಗೆ ಇದೆ. ಇಂಥ ನಿಸರ್ಗದ ಮಡಿಲಲ್ಲಿ, ಆ ಕೆರೆಯ ದಂಡೆಯ ಸಮೀಪದಲ್ಲಿ ಒಂದು ಮನೆ ಕಟ್ಟಿಸಬೇಕೆಂಬ ಕನಸು ನನ್ನ ತಂದೆಯದಿತ್ತು. ಇಲ್ಲಿಯ ಕೆಲಸದಿಂದ ಮುಕ್ತನಾದ ಮೇಲೆ ನಾನು ಅದನ್ನು ಮಾಡಬೇಕೆಂದಿದ್ದೆ. ಅದಕ್ಕಾಗಿಯೆ ನನ್ನ ದುಡಿತದ ಹಣ ಕೂಡಿಸಿ ಇಟ್ಟಿದ್ದೆ... ರಾಧಿಕಾ, ಸಂಶಯದಿಂದ ನನ್ನ ಕಡೆಗೆ ನೋಡುತ್ತಿರುವೆ! ಓ! ನನಗೂ ಗೊತ್ತಿದೆ! ನಾನು ಮದ್ರಾಸದವನು, ಅವಳು ಕಾರವಾರದವಳು! ಇಬ್ಬರಿಗೂ ಸಂಬಂಧವಿಲ್ಲದ್ದು, ಇದು ಏಕೆ ಅನ್ನುವಿಯಾ?.... ಇದೆ, ರಾಧಿಕಾ ಇದೆ........ ನನ್ನ ತಂದೆ ಧಾರವಾಡದಲ್ಲಿ ಫಾರೆಸ್ಟ ಆಫೀಸದಲ್ಲಿ ಕೆಲಸ ಮಾಡುತ್ತಿದ್ದರು. ಅವರಿಗೆ ಕೆರೆಯಗುಂಟ ಮನಬಂದಂತೆ ಬೇಕಾದ ಕಡೆಗೆ ತಿರುಗುವುದು ಬಹಳ ರುಚಿಸುತ್ತಿತ್ತು. ಸೂಟಿಯ ದಿನಗಳನ್ನೆಲ್ಲ ಈ ನಿಸರ್ಗದ ಬೆಡಗನ್ನು ನೋಡುತ್ತಲೆ ಕಳೆಯುತ್ತಿದ್ದರು... ಒಂದು ದಿನ ಹೀಗೆಯೆ ತಿರುಗುತ್ತಿರುವಾಗ ಈ ಚಿಕ್ಕ ಕೃಷ್ಣನ ಮೂರ್ತಿ ಅವರ ಕಣ್ಣಿಗೆ ಬಿದ್ದಿತು. ಅದನ್ನು ಮನೆಗೆ ತೆಗೆದುಕೊಂಡು ಬಂದು ಪೂಜಿಸಿದರು. ಅದಕ್ಕೆ ಭಯಭಕ್ತಿಯಿಂದ ನಡೆದುಕೊಂಡರು. ಅಂದಿನಿಂದ ಅವರಿಗೆ ಜೀವನಲ್ಲಿ ಶಾಂತಿ ನೆಲೆಸಿತು. ಹೆಚ್ಚಿನ ಆಫೀಸರ ನೌಕರಿಯೂ ದೊರಕಿತು. ಅದಕ್ಕೇ ರಾಧಿಕಾ, ಅವರು ಆ ಸ್ಥಳವನ್ನು ಮೆಚ್ಚಿದ್ದರು. ಅಲ್ಲದೇನು ನೋಡು. ರಾಧಿಕಾ, ನಾನು ರಮಾಳನ್ನು ಕಂಡದ್ದು— ಮೊದಲ ಸಲ ಕಂಡದ್ದು— ಕಾರವಾರದಲ್ಲಿ ಅಲ್ಲ. ಅವಳನ್ನು ನೋಡಿ ಪ್ರೀತಿಸಿದ್ದು ಕಾರವಾರದಲ್ಲಿ, ಅಲ್ಲ— ಧಾರವಾಡದಲ್ಲಿ ........... ಓ! ರಮಾಳಿಗೆ ಎಲ್ಲವೂ ಗೊತ್ತಿದೆ! ಆ ...... ಅವಳು ........ ಇದ್ದರೆ ...... ಅವಳು ........ ಬಂದಿದ್ದರೆ ........ ಓ!! ........ "

**ಮಾತಿನ ತೆರೆ ಮೂರು.**

" ರಾಧಿಕಾ, ರಾಧಿಕಾ, ಏನು ನನ್ನದೇ ಕತೆ ಹೇಳುತ್ತಿರುವಿಯೇನು ? ಆಯ್ಯೋ ಆ ಹಳೆಯ ನೆನಪು ತೆಗೆಯದಿರುವುದೇ ಒಳಿತು "

"ಅಲ್ಲ, ಇವರು ನಮ್ಮ ಕಾಲೇಜದಲ್ಲಿಯ ಪ್ರೊಫೆಸರರು! ಇಷ್ಟು ದೂರ ಎರಡು ಮೈಲು ನಡೆದುಬಂದು ಕುಳಿತಿದ್ದಾರೆ. ಏನೋ ಮಾತಿಗೆ ಮಾತು ಬಂದಿತು, ಹೇಳುತ್ತಿದ್ದೆ ಅಷ್ಟೆ!"

"ಜನರು ನಮ್ಮ ದೇವರ ಭಕ್ತಿಯ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಳ್ಳ ಬಹುದು. ಅದಕ್ಕೆ ಸುಮ್ಮನಿರುವುದೇ ಒಳಿತು."

"ರಾಧಿಕಾ- ರಮಾದೇವಿಯವರೇ ನಾನು ಏನೂ ತಪ್ಪು ಭಾವಿಸುವ ದಿಲ್ಲ."

"ಅಹುದು! ಅಂತೆಯೆ ನಾನಿದೆಲ್ಲ ಹೇಳುತ್ತಿರುವೆ"

"ರಾಧಿಕಾ, ನಿಮ್ಮ ಆ ಕತೆಯನ್ನು ರಮಾದೇವಿಯವರಿಗೆ ಹೇಳಿದರೆ ಚನ್ನಾಗುವುದು"

"ಓ! ಅದೇ ...... !" ಎನ್ನುತ್ತ ರಮಾದೇವಿಯವರು ಪ್ರಾರಂಭಿಸಿ ದರು. "ನಮ್ಮ ರಾಧಿಕಾಳಿಗೆ ಎಲ್ಲವೂ ಗೊತ್ತಿದೆ. ಆದರೂ ಒಂದು ರೀತಿ ಯಿಂದ ಗೊತ್ತಿಲ್ಲವೆಂದೇ ಹೇಳಬೇಕು ಏಕೆಂದರೆ ಎಲ್ಲ ಅನುಭವಿಸಿದವಳು ನಾನು. ಎರಡು ಬ್ಯಾಂಕುಗಳಿಗೆ ಹೋಗಿ ಚಕ್ಕು ಮುರಿಸಿದೆ. ಲೇವು ಹಣ ತೆಗೆದುಕೊಂಡೆ! ಇನ್ನೂ ಹಲವು ಬ್ಯಾಂಕಿಗೆ ಹೋಗಬೇಕಿತ್ತು. ಊಟ ಮುಗಿಸಿ ಅದೇ ಹೊರಡುವವಳಿದ್ದೆ. ಅಷ್ಟರಲ್ಲಿಯೆ ಏಯರ ರೇಡ್‌ಗಂಟೆ ಬಾರಿಸಿತು! ಜಪಾನದ ದಾಳಿ ಆರಂಭವಾಯಿತು. ಜನರೆಲ್ಲ ಕಕ್ಕಾವಿಕ್ಕಿಯಾಗಿ ಓಡಹತ್ತಿದರು. ನಾನೂ ಏಯರ ರೇಡ್ ಶೆಲ್ಟರ ಕಡೆಗೆ ಓಡಿದೆ. ನನಗೆ ನಿಂತ ನಿಂತಲ್ಲಿಯೆ ನನ್ನ ಹಣದ ನೆನಪಾಯಿತು! ಮತ್ತೆ ಮನೆಯೊಳಗೆ ಹೋಗಿ ಅವನ್ನು ತೀವ್ರವಾಗಿ ತೆಗೆದುಕೊಂಡು ಬರಬೇಕೆಂದೆ. ಮನಸ್ಸು ಬಲವತ್ತರವಾಗಿ ಅತ್ತಕಡೆ ಓಡಿತು. ಜನರು ನನ್ನನ್ನು ಹೊರಗೆ ಬಿಡಲಿಲ್ಲ. ಆದರೂ ಎಲ್ಲರನ್ನೂ ಕೊಸರಿಕೊಂಡು ಓಡಿದೆ! ........... ಓಹೋ! ನಾನು ಕಣ್ಣಾರೆ ಬಾಂಬು ಬೀಳುವದನ್ನು ನೋಡಿದೆ. ಅಬ್ಬಾ! ಅದೆಂಥ ಸಪ್ಪಳ! ಅದೆಂಥ ಧ್ವನಿ! ನಾನು ಹಣದ ಚೀಲವನ್ನು ತೆಗೆದುಕೊಂಡು ಓಡಿಬರುವಾಗ, ಅಯ್ಯೋ, ನನ್ನ ಕಣ್ಣೆದುರಿಗೇ ಬಾಂಬಿನ ಹೊಡೆತದಿಂದ ಜನರು ಸಾಯುವ

ದನ್ನು ನೋಡಿದೆ. ನನ್ನ ಹಿಂದೆಯೇ ಭಯಂಕರ ಸಪ್ಪಳವಾಯಿತು. ನಾನು ಹೊರಳಿ ನೋಡಿದೆ. ನಮ್ಮ ದೊಡ್ಡಮನೆ— ಒಮ್ಮೆಲೆ ಅಗ್ನಿಗೆ ಆಹುತಿ ಯಾಯಿತು! ಎಷ್ಟು ಜನ ಸಾಯುತ್ತಿತ್ತು! ಎಷ್ಟು ಕಟ್ಟಡಗಳು ಉರಿಯು ತ್ತಿದ್ದವು! ನಾನೊಬ್ಬಳೇ ಹೇಗೆ ಪಾರಾದೆನೋ! ನನಗೆ ಇನ್ನೂ ಆಶ್ಚರ್ಯ ವೆನಿಸುತ್ತದೆ. ಅದು ದೇವರ ಕೃಪೆಯೇ ಇರಬೇಕು! ಓಡಿಹೋಗಿ 'ಶೆಲ್ಟರಿ' ನಲ್ಲಿ ಅಡಗಿಕೊಳ್ಳುವಷ್ಟು ಬುದ್ಧಿ ನನಗೆ ಹರಿಯಲಿಲ್ಲ. ನಾವು ವಾಸಮಾಡಿ ಕೊಂಡಿದ್ದ ಮನೆ ನನ್ನೆದುರಿಗೇ ಬೀಳುವದನ್ನು ನೋಡಿ ಕಲ್ಲಿನಂತೆ ನಿಂತು ಕೊಂಡೆ ........ ಆಗ ಯಾವುದೋ ಅಪರಿಚಿತ ಧ್ವನಿ ಕೇಳಿಸಿತು. ನನ್ನನ್ನು ಗಟ್ಟಿಯಾಗಿ ಹಿಡಿದರು. ನನ್ನ ಮೈಮೇಲೆ ನನಗೆ ಎಚ್ಚರಿಕೆ ಇರಲಿಲ್ಲ........"

"ನೋಡಿ, ಇವಳಿಗೆ ಹೀಗೆ ಆದ ಹೊತ್ತಿನಲ್ಲಿಯೇ ದವಾಖಾನೆಯಲ್ಲಿ ನಮ್ಮ ತಂದೆಗೆ ಎಚ್ಚರಿಕೆ ಇರಲಿಲ್ಲ. ಮುಂದೆ ಕೆಲವೇ ವೇಳೆಯಲ್ಲಿ ........ ! ಮೇಲೆ ವಿಮಾನದಾಳಿಯಿತ್ತು! ಆದರೆ ನಮಗೆ ಬೇರೆ ವಿಮಾನಗಳ ಕಲ್ಪನೆ ಗಳೇ ಬರುತ್ತಿದ್ದವು!"

ಸ್ತ್ರೀ ನನ್ನ ಸ್ಥಿತಿಯಂತೂ ಹೇಳತೀರದು. ಮಕ್ಕಳ ವಿಚಾರ ಮಾಡಲೆ? ಪತಿಯ ವಿಚಾರಮಾಡಲೇ? ಯಾವುದೂ ತಿಳಿಯುವಂತಿರಲಿಲ್ಲ. ಒಂದು ಗುಡ್ಡದ ಓರೆಯಲ್ಲಿ, ಒಂದು ದೊಡ್ಡ ಜೇಲುಕಟ್ಟಿ ನಮ್ಮನ್ನು ಅಲ್ಲಿ ಬಿಟ್ಟು ಬಿಟ್ಟರು. ನಮ್ಮ ಸುತ್ತುಮುತ್ತಲೂ ಯಾವಾಗಲೂ ಕಾವಲು. ನಮ್ಮ ಹೊಟ್ಟೆ ನಮಗೆ ತುಂಬಿಕೊಳ್ಳಲು ಹೇಳಿಬಿಟ್ಟರು. ದುರಾಶೆಯಿಂದ ಆ ದಿನ ಹಣವನ್ನು ತೆಗೆದುಕೊಳ್ಳಲು ಹೋದೆ. ಆದರೆ ಅದು ನನ್ನ ಪಾಲಿಗೆ ದೊರೆಯಲೇ ಇಲ್ಲ. ಈ ಜಗತ್ತಿನಲ್ಲಿ ಎಲ್ಲವೂ ಅನಿಶ್ಚಿತ!... ನನ್ನ ಹೊಟ್ಟೆಗಾಗಿ ಬೇಕಾದುದನ್ನು ಮಾಡಬೇಕಾಯಿತು... ಓ! ಹೆಚ್ಚಿಗೇನು ಹೇಳುವುದು ನಮ್ಮ ಮಾನಾಪಮಾನ ಏನೂ ಉಳಿಯಲಿಲ್ಲ!... ನನ್ನ ಮಗುಗಳ ಮುಖ ವನ್ನು ನೋಡುವದಿಲ್ಲವೇನೋ ಎಂದಿದ್ದೆ!" ತಾಯಿ ನಿಟ್ಟುಸಿರುಗರೆದರು.

"ನೋಡಿ, ನಾವಂತೂ ಎಲ್ಲ ಆಶೆ ಪೂರ್ತಿಯಾಗಿ ಬಿಟ್ಟಿದ್ದೆವು. ತಂದೆ ತಾಯಿಗಳನ್ನು ಕಳೆದುಕೊಂಡ ಅನಾಥರಂತೆ ನಾವು ಇಲ್ಲಿ ತಿರುಗುತ್ತಿದ್ದೆವು.

ಹೀಗೆ ಎಷ್ಟೋ ದಿನಗಳನ್ನು ಕಳೆದಿದ್ದೇವೆ. ಗಾಳಿಯ ಸಂಗಡ ಗುದ್ದಾಡಿದ್ದೇವೆ" ರಾಧಿಕಾ ನುಡಿದಳು.

"ರಾಧಿಕಾ, ನಿಮಗೂ ನಿಮ್ಮ ತಾಯಿಗೂ ಹೇಗೆ ಭೆಟ್ಟಿಯಾಯಿತು?"

"ದೇವರು ಕರುಣೆಬಟ್ಟು ಕಳಿಸಿಕೊಟ್ಟನೆಂದೇ ಹೇಳಬೇಕು. ಆ ದಿನ ಕೃಷ್ಣ ಜಯಂತಿ! ವಾಡಿಕೆಯಂತೆ ಭಕ್ತಿಯ ಹೃದಯದ ಹೂಗಳನ್ನು ದೇವರಿಗೆ ಸಮರ್ಪಿಸಿ ಇನ್ನು ಊಟ ಮಾಡಬೇಕೆಂದು ಕುಳಿತಿದ್ದೆವು. ಆಗ ಒಮ್ಮೆಲೆ....!"

"ರಾಧಿಕಾ! ರಾಧಿಕಾ! ನನ್ನ ಧ್ವನಿ ಹೇಗೆ ಅನಿಸಿತು ಆಗ?" ತಾಯಿ ಉತ್ಸುಕತೆಯಿಂದ ಕೇಳಿದಳು.

"ನೋಡಿ, ಅವನ್ನು ಈ ನಾಲಿಗೆಯಿಂದ ಹೇಳುವುದು ಸಾಧ್ಯವಿಲ್ಲ! ನನ್ನ ತಂಗಿಯರು ಕುಣಿದಾಡಿದರು. ಮನಿಯನ್ನು ಎಷ್ಟು ಮುದ್ದಾಡಿದರೂ ತೀರದು! ಹಲವು ಕ್ಷಣ ನನ್ನ ಕಣ್ಣುಗಳನ್ನು ನಾನು ನಂಬದಾದೆ! ದೇವರ ಅಗಾಧ ಲೀಲೆ!"

"ಅಹುದು! ನನ್ನ ಕಣ್ ಬೊಂಬೆಗಳು ಇಲ್ಲಿಯೆ ಇವೆಯೆಂದು ಹೇಳಿದವನೂ ಅವನೆ! ಅಂತೆಯೇ ಬಹುದೂರ ಬಹುದೂರ ಇಲ್ಲಿಗೆ ಬಂದೆ!"

## ಮುಗಿಯದ ಮಾತಿನ ತೆರೆ ನಾಲ್ಕು

" ರಾಧಿಕಾ, ಈ ಚಿತ್ರ ನಿಮಗೆ ಅರ್ಪಿಸಲು ತಂದಿದ್ದೇನೆ."

" ಎಲ್ಲಿ ನೋಡೋಣ ...... "

" ಇಗೋ ಇಲ್ಲಿ ನೋಡಿ. ಯಮುನೆಯ ನದಿಯ ದಂಡೆಯ ಮೇಲೆ, ಒಂದು ಮರದ ಕೆಳಗೆ ಕೊಳಲು ಇದೆ. ಮೇಲೆ ಆಕಾಶದಲ್ಲಿ ........ "

" ವಿಮಾನುಗಳು !! ಇದೇನು ಕೃಷ್ಣದೇವರ ಯುಗದಲ್ಲಿ ವಿಮಾನಗಳು ಇದ್ದವೆ? "

"ನಗಬೇಡಿ ರಾಧಿಕಾ! ವಿಮಾನಯುಗದಲ್ಲಿ ಅಂದರೆ ಯಂತ್ರಯುಗದಲ್ಲಿಯೂ ದೇವರಿದ್ದಾನೆ. ನೋಡಿ, ಯಾವ ಯುಗವೇ ಇರಲಿ, ದೇವರು ತನ್ನ ಅಸ್ತಿತ್ವದ ಬಗ್ಗೆ ಏನಾದರೂ ಲೀಲೆ ಮಾಡಿ ತೋರಿಸುತ್ತಿರುತ್ತಾನೆ. ಜನರಿಗೆ ಅವನ ಧ್ಯಾನವಿಲ್ಲದೆ ನಡೆಯುವುದಿಲ್ಲ ಎಂಬ ಭಾವನೆ ಬಲವಾಗಿ ಬಂದುಬಿಡುತ್ತದೆ. ಇದು ಚಿರಂತನ! ನೀವು ಆ ದಿನ ಸುಶ್ರಾವ್ಯವಾಗಿ ಕೊಳಲು ಬಾರಿಸಿದಿರಿ. ನಿಮ್ಮ ಜೀವನದ ಕತೆಯನ್ನೆಲ್ಲ ಆ ಕೊಳಲೆ ಹೇಳಿದಂತಾಯಿತು! ಆ ದಿನವೆ ನನ್ನ ಹೃದಯ ಬಿರಿಯಿತು! ದೇವರ ಅಗಾಧ ಲೀಲೆಯನ್ನು ನೆನೆಸಿತು! ಅಂದಿನಿಂದಲೇ ಈ ಚಿತ್ರದ ರೂಪ ರಚಿತವಾಗ ತೊಡಗಿತು!"

"ಓ! ಒಳ್ಳೇ ಕುಶಲ ಚಿತ್ರಗಾರರು ನೀವು! ಚಿತ್ರದಲ್ಲಿ ಆಸುರ ವಾಣಿಯನ್ನು ಚಿತ್ರಿಸಿರುವಿರಿ ......... ಆದರೆ, ಇದೇನು? ರಾಧೆ ಹಾಗೆ ನಿಂತಿರುವಳಲ್ಲ?"

"ಅಹುದು, ರಾಧಿಕಾ! ಅವಳು ಕೊಳಲನ್ನು ಮುಟ್ಟಿಲ್ಲ. ಆದರೂ ಅವಳಿಗೆ ಕೊಳಲ ಧ್ವನಿ ಕೇಳುತ್ತದೆ! ಕೃಷ್ಣ ಕಾಣವಿದ್ದರೂ ಕೊಳಲು ಉಳಿದಿದೆ."

# ಲೋಕೋಪಕಾರ!

ಸಾಥಿ ಶಿವರಾವ ಅವರಿಗೆ ಬಹು ದೊಡ್ಡ ಚಿಂತೆ! ಅವರು ಅನೇಕ ಪ್ರಶ್ನೆಗಳನ್ನು ಬಹು-ಸರಳವಾಗಿ ಬಿಡಿಸುತ್ತಿದ್ದರು. ಪರೀಕ್ಷೆಯಲ್ಲಿ ಅನೇಕ ಪ್ರಶ್ನೆಗಳಿಗೆ ಉತ್ತರ ಬರೆದಿದ್ದರು. ಆದರೆ ಎಂತಹ ದೊಡ್ಡ ಪ್ರಶ್ನೆ ಬಂದು ಈಗ ಅವರ ಮನವೆಂಬ ಮನೆಯಲ್ಲಿ ವಾಸವಾಡಿತ್ತು!!! ಚಿಂತೆಯಿಂದ ಅವರಿಗೆ ಎರಡು-ಮೂರು ದಿನ ರಾತ್ರಿ ನಿದ್ರೆಯೆ ಆಗಿರಲಿಲ್ಲ.

ಸಾಥಿ ಶಿವರಾವ, ಅವರ ತಂದೆ ಅಷ್ಟು ಹಣಗಳಿಸದೆ ಇದ್ದರೆ, ಅವರಿಗೆ ಈ ಚಿಂತೆ ಬರುತ್ತಿರಲೆ ಇಲ್ಲ. ಜಿಪುಣರಲ್ಲಿ ಜಿಪುಣರಾಗಿ, ಪೈಗೆ ಪೈ ಲೆಕ್ಕ ಹಾಕಿ ಲೆಕ್ಕವಿಲ್ಲದಷ್ಟು ಧನ ಸಂಪಾದಿಸಿದ್ದರು. ಶಿವರಾವ ಅವರು 'ಸಾಥಿ' ಯಾದುದರಿಂದ ಅವರಿಗೆ ಇಷ್ಟು ಶ್ರೀಮಂತರಾಗುವದು ಬೇಕಾಗಿರಲಿಲ್ಲ. ಅಂತೆಯೆ ಅವರ ಚಿಂತೆ ಬಹು ತೀವ್ರತರವಾದುದಾಗಿತ್ತು.

ಕತ್ತಲಂಥ ಕತ್ತಲವೆ ಹಾರಿಹೋಗಿ ಸೂರ್ಯೋದಯವಾಯಿತು. ಶಿವರಾವ ಅವರಿಗೂ ಆ ಬೆಳಗಿನಲ್ಲಿ ಒಂದು ಅಮೋಘ ವಿಚಾರ ಹೊಳೆಯಿತು. ಉತ್ಸಾಹದಿಂದ ಲಟಕಿ ಹೊಡೆಯುತ್ತ ಹಾಸಿಗೆಯಿಂದ ಎದ್ದರು. ಬೆಳಗಿನ ಎಲ್ಲ ನಿತ್ಯ ಕರ್ಮಗಳನ್ನು ತೀರಿಸುವಾಗಲೆಲ್ಲ ಅವರ ತಲೆಯಲ್ಲಿ ಅದೇ ವಿಚಾರವೇ ಸುಳಿಯುತ್ತಿತ್ತು ನರ್ತಕಿ ಒಂದೇ ಕುಣಿತದಲ್ಲಿ ಅನೇಕ ಭಾವ-ಭಂಗಿಗಳನ್ನು ತೋರಿಸುವಂತೆ ಆ ವಿಚಾರ ಶಿವರಾವ ಅವರ ಮನದಲ್ಲಿತ್ತು.

ವೇಷ-ಭೂಷಣ ಮುಗಿಸಿ, ಸಜ್ಜಾಗಿ ಕುರ್ಚಿಯ ಮೇಲೆ ಸಿಂಹಾಸನಾರೂಢವಾಗಿ ಶಿವರಾವ ಅವರು "ಬುಡ್ಡಾ" ಎಂದು ಕರೆದರು.

"ಬುಡ್ಡಾ" ಅವರ ಮನೆಯ ಆಳುಮನುಷ್ಯ. ಬಹುದಿನಗಳಿಂದ ಅವನು ಶಿವರಾಯರ ಮನೆಯಲ್ಲಿದ್ದವನು. ಶಿವರಾಯರ ತಂದೆ, ತಂದೆಯ

ತಂದೆ, ಎಲ್ಲರ ಸ್ವಭಾವವನ್ನು ಸಂಪೂರ್ಣ ಅಭ್ಯಾಸಮಾಡಿದ್ದನು. ಹೆಸರಿಗೆ. ಅನುಸರಿಸಿ ಈಗಾಗಳೆ ಅವನು ಬುಡ್ಡಾ ಆಗಿದ್ದನು.

ಶಿವರಾಯನು ಕೂಗಿದೊಡನೆ ಅವನು ಓಡಿಬಂದನು. ಬಹು ನಮ್ರವಾಗಿ ಹೊಸ ರಾಯರಿಗೆ ಬಾಗಿ ನಮಸ್ಕರಿಸಿದನು. ಇದೇ ರಾಯರನ್ನು ತನ್ನ ಕೈತೋಳುಗಳಲ್ಲಿ ಆಡಿಸಿ ಬೆಳೆಯಿಸಿದ್ದನು.

"ನೋಡು ಬುಡ್ಡಾ, ಈ ತಿಂಗಳಿಂದ ಅರ್ಧ ಬಾಡಿಗೆ ಕಡಿಮೆಯೆಂದು ಎಲ್ಲರಿಗೂ ತಿಳಿಸು." ಶಿವರಾಯರ ಈ ಮಾತು ಕೇಳಿ ಬುಡ್ಡಾ ಅತಿಗಾಬರಿಯಾದನು. ಒಂದು ನಿಮಿಷ ಅವನ ತಲೆಯಲ್ಲಿ ಯಾವ ವಿಚಾರವೂ ಹೊಳೆಯಲಿಲ್ಲ. ತಾನು ಎಲ್ಲಿ ನಿಂತಿರುವೆನೆಂಬುದೂ ಗೊತ್ತಾಗಲಿಲ್ಲ. ಒಂದು ದೊಡ್ಡ ಚಕ್ರ ತಲೆಯಲ್ಲಿ ತಿರುಗಿದಂತಾಯಿತು. ಶಿವರಾಯರ ತಂದೆ- ಪ್ರತಿ ವರ್ಷ ಬಾಡಿಗೆ ಏರಿಸಬೇಕೆನ್ನುತ್ತಿದ್ದರು. ಅವರು ಸತ್ತು ಇನ್ನೂ ಒಂದು ತಿಂಗಳಾಗಿರಲಿಲ್ಲ. ಇವರು ಹೀಗೆ ಮಾತನಾಡಿದುದನ್ನು ಕೇಳಿದಕೂಡಲೇ ದಂಗುಬಡೆದಂತಾಯಿತು.

ಅರ್ಧ ನಿಮಿಷದಲ್ಲಿ ಎಚ್ಚರಾದಂತಾಗಿ "ಅಲ್ಲ ದೊಡ್ಡ ರಾಯರು ಇದ್ದರೆ?........" ಎಂದು ಬುಡ್ಡಾ ಇನ್ನೂ ಏನೇನೋ ಹೇಳುವವನಿದ್ದನು.

ಶಿವರಾವ ಅವರು ಅವನ ಮಾತುಗಳನ್ನು ಒಮ್ಮೆಲೆ ತಡೆದುಬಿಟ್ಟರು. "ಇದು ಹೀಗೆ ಆಗಲೇ ಬೇಕು." ಎಂದು ಭೀಮ ಪ್ರತಿಜ್ಞೆ ಮಾಡಿದವರಂತೆ ಗರ್ಜಿಸಿದರು.

ಆ ಗರ್ಜನೆಯನ್ನು ಕೇಳಿ ಬುಡ್ಡಾ ಗಡ-ಗಡನೆ ನಡುಗಿದನು. ಛಡಿಯ ಸಪ್ಪಳವನ್ನು ಕೇಳಿದಾಗಲೂ, ವಿದ್ಯಾರ್ಥಿಗಳು ಅಷ್ಟು ನಡುಗಿರಲಿಕ್ಕಿಲ್ಲ.

ಅನುಮಾನಿಸುತ್ತ ನಿಂತ ಬುಡ್ಡಾನನ್ನು ನೋಡಿ- "ಹ್ಞಾ, ಹೋಗು ಎಲ್ಲರಿಗೂ ಇದನ್ನು ತಿಳಿಸು" ಎಂದು ಒತ್ತಿ ಮತ್ತೊಮ್ಮೆ ಶಿವರಾವ ಕೂಗಿಕೊಂಡರು.

ಬುಡ್ಡಾನಿಗೆ ತಾನು ಯಾವರೀತಿ ನಡೆಯುತ್ತಿದ್ದೇನೆಂಬುದೇ ಗೊತ್ತಾಗ ಲಿಲ್ಲ. ತಲೆ ಕಲ್ಲಿನಷ್ಟು ಭಾರವಾಗಿತ್ತು. ಶಿವರಾಯರು ಹೇಳಿದ ಮಾತು ಗಳು ಅವನನ್ನು ಭ್ರಮನಿರಸನ ಮಾಡಿದ್ದವು.

" ಹೋತು ...... ೧೦೦ ಕ್ಕೆ ೫೦ ........ ಹೋತು ........ ೧೦೦ ಕ್ಕೆ ೫೦ ...... ಅರ್ಧ ಹೋತು ........ ಹೋತು "

ಬುಡ್ಡಾ ತನ್ನ ಚಿಕ್ಕ ಮನೆಯ ಹೊರಬಾಗಿಲಿನ ಹತ್ತಿರ ನಿಂತು ಲೆಕ್ಕ ಹಾಕುತ್ತಿದ್ದನು: ಕೈ ಬೆರಳು ಅಂಕಿಗಳನ್ನು ಬರೆಯುತ್ತಿದ್ದವು; ಗಾಳಿಯಲ್ಲಿ ಒಮ್ಮೊಮ್ಮೆ ಜೋತಾಡುವ ತಲೆಯನ್ನು ಬಿಗಿಹಿಡಿದುಕೊಳ್ಳುತ್ತಿದ್ದವು.

ಒಗ್ಗರಣೆಯನ್ನು ಕೊಡುವಾಗ " ಚುಂಯ್ " ಎನ್ನುವ ಸಪ್ಪಳವನ್ನು ಭೇದಿಸಿ ಈ ಮಾತುಗಳು ಬುಡ್ಡಾನ ಹೆಂಡತಿಗೆ ಕೇಳಿಸಿದವು. ಅವಳು ಸವುಟನ್ನು ಕೈಯಲ್ಲಿ ಹಿಡಿದುಕೊಂಡವಳು ಹಾಗೆಯೇ ಹೊರಗೆ ಹೋದಳು.

ಹೊರಗೆ ಅಭೂತ ಪೂರ್ವ ದೃಶ್ಯ! ಬುಡ್ಡಾ ಎಂದೂ ಹೀಗೆ ಮಾಡಿರ ಲಿಲ್ಲ! ಅವನ ತಲೆ ಎಂದಿಗೂ ಅಲುಗಾಡಿರಲಿಲ್ಲ! ಅವನು ಕೈ ಬೆರಳುಗಳನ್ನು ಈ ರೀತಿ ತಿರುವುತ್ತಿರಲಿಲ್ಲ!

" ಏನದು ? " ಎಂದಳವಳು.

" ಹೋತು ...... ಅರ್ಧ."

" ಹೋತು ಎಂದಾದರೂ ಅರ್ಧ ಇರುವುದೇ ? "

" ಅಲ್ಲ ಅರ್ಧ ಹೋತು."

" ಏನದು ? ಸ್ಪಷ್ಟವಾಗಿ ಹೇಳಿರಿ. ಹೋತನ್ನು ಕೊಂದಿರೋ ಹೇಗೆ? ಯಾವ ಹೋತು ? ಏನು ಅನಾಹುತ ? "

ಅವಳು ಚಿಟ್ಟನೆ ಚೀರಿ, ಸವುಟನ್ನು ಬಿಸುಟಿ, ನೆಲದ ಮೇಲೆ ಕುಕ್ಕರಿಸಿ ಅಳಲಾರಂಭಿಸಿದಳು!

ಸವುಟನ್ನು ಬಿಸುಟುವಾಗ, ಬುಡ್ಡಾನ ತಲೆಗೆ ಒಗ್ಗರಣೆಯ ರುಚಿ ಹತ್ತಿತು. ಅವನು ಕೂಡಲೇ ಎಚ್ಚತ್ತು, ಹೆಂಡತಿಯನ್ನು ಒಳಗೆ ಕರೆದು

ಕೊಂಡು ಹೋಗಿ ಅತ್ಯಂತ ಮೇಲು ದನಿಯಿಂದ ಹೇಳಿದ " ಈ ರಾಯರು ಮನೆಯ ಬಾಡಿಗೆ ಕಡಿಮೆ ಮಾಡಿದರು. ಅರ್ಥ ಹೋತು "

ಮುಖಬಾಡಿಸಿದವಳು ಒಮ್ಮೆಲೆ ನಕ್ಕಳು. ಬಿದ್ದು ಬಿದ್ದು ನಕ್ಕಳು. ಗಿರಿಕಂದರಗಳನ್ನು ಕೊರೆದು ಬರುವ ಧ್ವನಿಯಂತೆ ಅವಳ ನಗೆಯ ತೆರೆಗಳು ತೂರಿ ಬಂದವು.

ಅವಳು ಹೊರಗೆ ಓಡಿಬಂದಳು. ಬುಡ್ಡಾ ' ಉಶ್ ' ಎಂದು ಗೋಡೆಗೆ ಆತುಕೊಂಡು ಬಿಟ್ಟನು. ಇವರ ಚಿಕ್ಕ ಮನೆಯ ಎದುರಿಗೆ ಮೂರು ಮಜಲಿನ ಮನೆ, ಅಲ್ಲಿ ಅನೇಕ ಮನೆಗಳಿದ್ದವು. ಸುಮಾರು ನಾಲ್ವತ್ತು ಇರಬಹುದು.

ಅವಳು " ಏ ........ " ಎಂದು ಕೂಗಿದಳು.

ಕೆಳಗಿನ ಮನೆಯ ಬಾಗಿಲಲ್ಲಿ ನಿಂತ ಕಮಲೂ ಇವಳ ಧ್ವನಿಯನ್ನು ಕೇಳಿ ಅಲ್ಲಿಗೆ ಧಾವಿಸಿ ಓಡಿಬಂದಳು.

" ಏನು ಅದು ? " ಎಂದು ಕೇಳಿದಳು.

"ನಿಮ್ಮ ಬಾಡಿಗೆ ಎಷ್ಟು?"

"೪೦ ರೂಪಾಯಿ ।। "

"ಈ ತಿಂಗಳಿಂದ ನೀವು ೨೦ ಕೊಡಿರಿ"

ಈ ಮಾತನ್ನು ಕಮಲು ಕೇಳಿ ಅಚ್ಚರಿಯಾದಳು. ತಾನು ಕನಸಿನಲ್ಲಿ ದುವೆನೇನೋ ಎನ್ನಿಸಿತು ಅವಳಿಗೆ. ಹುಚ್ಚಿಯಂತೆ ಅವಳು ಮಾತನಾಡುವು ದನ್ನು ನೋಡಿ ನಗೆ ತಡೆಯಲಾರದೆ ಕಮಲು ನಕ್ಕಳು.

"ಕಮಲಾಬಾಯಿ, ನಿಜ..."

"ಯಾರು ಹೇಳಿದರು?"

"ಹೊಸ ಚಿಕ್ಕರಾಯರು ಈ ದಿನ ಸಂಜೆ ಎಲ್ಲರಿಗೂ ತಿಳಿಸುವರು"

ಕಮಲ ರಾಯ್ಟರ ಏಜೆನ್ಸಿಯ ಕೆಲಸ ಮಾಡಿದಳು. ಅವಳ ಧ್ವನಿಯ ಕುತೂಹಲತೆಯನ್ನು ಕಂಡು, ಮೈದೊಳೆದುಕೊಳ್ಳುವ ಹೆಂಗಳೆಯರು ಸಹ ಹಾಗೆಯೆ ತೊಯ್ದ ಬಟ್ಟೆಗಳಲ್ಲಿ ಪಡಸಾಲೆಯವರೆಗೆ ಓಡಿಬಂದಿದ್ದರು. ಗಾಳಿ

ಯಲ್ಲಿ ಕಿಚ್ಚು ಹಬ್ಬುವಂತೆ ಈ ಅಚ್ಚರಿಯ ವಿಷಯ ಬಾಡಿಗೆಯ ಮನೆಗಳ ತುಂಬ ಪಸರಿಸಿತು. ಕೊನೆಗೆ ಯಾರೋ ಒಬ್ಬ ಗಂಡಸರು ಅಂದರು—
" ಇದರಲ್ಲಿ ಏನಾದರೂ ಕುಟಿಲತನವಿರಬೇಕು ! "

ಊರಲ್ಲಿ ಬಾಡಿಗೆಗಳು ಇನ್ನೂ ಏರಿಕೆಯಲ್ಲಿಯೇ ಇದ್ದವು. ಇನ್ನೂ ಎಷ್ಟೋ ಜನ ವಾಸಿಸಲು ಬಾಡಿಗೆಯ ಮನೆಗಳಿಲ್ಲದೆ ಗೋಳಾಡುತ್ತಿದ್ದರು. ಅಂಥ ವೇಳೆಯಲ್ಲಿ ಇವರು ಅರ್ಧದಷ್ಟು ಬಾಡಿಗೆಯ ಹಣವನ್ನು ಕಡಿಮೆ ಮಾಡಿದುದನ್ನು ಕೇಳಿ, ಜನರಿಗೆಲ್ಲ ಏನೋ ಸಂಶಯ ಬಂದಿತು. ಹಗಲು-ರಾತ್ರಿ ಜನಕೆಲ್ಲ ಏನೇನೋ ಮಾತನಾಡತೊಡಗಿದರು-

೪–೫ ದಿನಗಳು ಹೋದವು ಕಪ್ಪುಬಣ್ಣದ ಸುಂದರಿ ಮತ್ತು ಅವಳ ಗಂಡ ಹೋಲ್ಡಾಲ್ ಹೊರಿಸಿಕೊಂಡು ಸಾಗಿದ್ದರು. ಕಮಲು ಇದನ್ನು ನೋಡಿ ತನ್ನ ಗಂಡನಿಗೆ ಇದರ ಕಾರಣ ಕೇಳಿದಳು.

" ಸುಂದರಮ್ಮ ಹೊರಟೇ ಬಿಟ್ಟಳಲ್ಲಾ ? "

" ಅಹುದು ಹೊರಟೇ ಬಿಟ್ಟುಬಿಟ್ಟರು. "

" ಏಕೆ? "

" ಮೊನ್ನೆ ಅಮಾವಾಸ್ಯೆಯ ರಾತ್ರಿ ಯಾರೋ ಹೆದರಿಸಿದಂತಾಯಿತಂತೆ! ಆವಳಿಗೆ ಮೈಮೇಲೆ ಪರಿವೆ ಇರಲಿಲ್ಲ."

" ಅಯ್ಯ, ಏನು ಭೂತ ಇದೆಯೋ ಇಲ್ಲಿ? "

" ಅಹುದು ಸ್ಮಶಾನದ ಜಾಗೆಯಲ್ಲಿಯೇ ಈ ಮನೆ ಕಟ್ಟಿಸಿದ್ದಾರಂತೆ! ಅಂತೆಯೆ ಬಾಡಿಗೆ ಕಡಿಮೆ ಮಾಡಿದ್ದಾರೆ! "

" ಅವ್ವಯ್ಯ, ನಾನು ಇಲ್ಲಿ ಇರುವುದು ಸಾಧ್ಯವೇ ಇಲ್ಲ."

" ಜನರು ಏನಾದರೂ ಅಂತಾರೆ. ನೀನ್ಯಾಕೆ ಹೆದರುವುದು ನಾನು ಇರಲಿಕ್ಕೆ ? "

"ಭೂತ ಇದ್ದರೆ ಹೇಗೆ ಇರುವುದು ?"

೫–೬ ದಿನಗಳಲ್ಲಿಯೆ ಕಮಲು ತನ್ನ ಗಂಡನನ್ನು ಕರೆದುಕೊಂಡು ಹೊರಟೇಬಿಟ್ಟಳು ! !

ಶಂಕರಯ್ಯನವರು ಭೂತಗಳಲ್ಲಿ ನಂಬಿಗೆಯಿಲ್ಲದವರು. ಅಂಥವರೂ ಈ ಸುದ್ದಿ ಕೇಳಿ ಚಂಚಲಿತರಾದರು. ಅವರಿಗಿಂತ ಅವರ ಹೆಂಡತಿ ದಿನಾಲು ಏನಾದರೊಂದು ಮಾತನಾಡುವದು ಸಾಗಿತು.

"ಭೂತ ಇದೆಯೋ ಇಲ್ಲವೋ ಯಾರಿಗೆ ಗೊತ್ತು ?"

"ಕಮಲೂನ ಮನೆಯಲ್ಲಿ ಇಲಿ ಬಿತ್ತಂತೆ. ಪ್ಲೇಗು ಹಬ್ಬುತ್ತಿರಬೇಕು. ಮಕ್ಕಳೆಲ್ಲ ಪ್ಲೇಗಿನಿಂದ ಸತ್ತರೆ ?"

ಹೆಂಗಸರ ಬಾಯಲ್ಲಿ ಹೇಗೋ ಈ ಮಾತು ಹೊರಟಿತು. ಶಂಕರಯ್ಯನವರು ಬೇಸತ್ತು ಅಲ್ಲಿಯ ಬಿಡಾರವನ್ನು ಕಿತ್ತಿದರು.

ಗಟ್ಟಿಮುಟ್ಟೆಯಾಗಿ ಒಂದೆಡೆಗೇ ನಿಲ್ಲುವ ಶಂಕರಯ್ಯನವರು ಸಹ ಮನೆಬಿಟ್ಟು ಹೋದದ್ದನ್ನು ಕಂಡು ಅನೇಕ ಜನ ಬೆದರಿದರು. ಇಲ್ಲಿಯ ಮನೆಗಳ ಸುದ್ದಿ, ಊರಲ್ಲಿಯೂ ವಿಚಿತ್ರ ವಾತಾವರಣವನ್ನು ಹುಟ್ಟಿಸಿತು. ಸಾಥಿ ಶಿವರಾಯರ ಬಾಡಿಗೆಯ ಮನೆಗಳನ್ನು ಜನರು ಬಿಟ್ಟುಹೋದದ್ದನ್ನು ಕುರಿತು ಊರಲ್ಲಿಯೂ ತರ್ಕ–ವಿತರ್ಕಗಳು ಸಾಗಿದ್ದವು. ಊರಜನರೂ ಗಾಬರಿಯಾಗತೊಡಗಿದರು. ಹಲವೇ ಜನ ಈಗ ಶಿವರಾಯರ ಬಾಡಿಗೆಯ ಮನೆಗಳಲ್ಲಿ ವಾಸವಾಗಿದ್ದರು.

ಒಂದು ರಾತ್ರಿ ಮಿಣಿ–ಮಿಣಿ ದೀಪದ ಸುತ್ತಲೂ ಜನರು ದಂಗುಬಡೆದು ಮಾತನಾಡುತ್ತಿದ್ದರು.

"ಶಂಕರಯ್ಯನವರು ಚಾಣಾಕ್ಷರು. ಮುಂದೆ ಹೀಗಾಗುವದೆಂದು ಅವರಿಗೆ ಗೊತ್ತು."

"ಏನು ? ಏನದು ?"

"ರಜಾಕಾರರು ಜನರನ್ನೆಲ್ಲಾ ಕೊಲ್ಲುತ್ತಿದ್ದಾರಂತೆ. ಈ ಊರ ಸಮೀಪದಲ್ಲಿಯ ಹಳ್ಳಿಗಳನ್ನೆಲ್ಲಾ ಹಾಳು ಮಾಡಿದ್ದಾರಂತೆ. ಅವರು ಭಂಗಾರ–ಬೆಳ್ಳಿ ಎಲ್ಲ ದೋಚಿಕೊಂಡು ಹೋಗುವರಂತೆ !"

"ಹಾಗಾದರೆ ಈ ಊರಿಗೂ ಬರುವರೆ ?"

"ಹೌದು. ಅಂತೆಯೆ ಶಂಕರಯ್ಯನವರು ಮುಂಜಾಗ್ರತೆ ವಹಿಸಿ ಪಾರಾಗಿದ್ದಾರೆ."

"ನೋಡಿರಿ, ಅವರು ಬಂದರೆ, ಊರಹೊರಗಿರುವ ನಮ್ಮ ಮನೆಗಳೆ ಮೊದಲು ಆಹುತಿಯಾಗುವವು."

"ಧಪ್ ! ಧಪ್!! ಸಪ್ಪಳವಾಯಿತು"

'ಅಯ್ಯೋ' ಎಂದು ಚೀರಿ ಎಲ್ಲರೂ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ದೀಪ ಉರುಳಿಬಿತ್ತು."

ದೀಪಹಚ್ಚಿ ನೋಡಿದಾಗ ಅಲ್ಲಿ ರಜಾಕಾರರು ಯಾರೂ ಇರಲಿಲ್ಲ. ಹಲವು ಇಲಿಗಳು ಮಾತ್ರ ಜಿಗಿಯುತ್ತಿದ್ದವು !

ತಿಂಗಳು ಮುಗಿಯಿತು. ಬುಡ್ಡಾ ಮಿಣಿ–ಮಿಣಿ ದೀಪವನ್ನು ಹಿಡಿದು ಕೊಂಡು ಎಲ್ಲ ಮನೆಗಳ ಮುಂದೆ ಹಾಯಬೇಕಂದು ಹೊರಟನು.

ಒಂದು ಮನೆಯಲ್ಲಿಯೂ ದೀಪಕಾಣಲಿಲ್ಲ. ಅರ್ಧದಾರಿಯಲ್ಲಿಯೇ ಹೆದರಿಕೊಂಡು ತಿರುಗಿ ಮನೆಗೆ ಓಡಿ ಬಂದನು. ಬುಡ್ಡಾ ಸಹ ಆ ಚಿಕ್ಕ ಮನೆಬಿಟ್ಟು ರಾಯರ ಮನೆಯ ಸಮೀಪದಲ್ಲಿಯೇ ವಾಸವಾಗತೊಡಗಿದನು. ರಜಾಕಾರರು ಬರುವರೆಂಬ ಸುದ್ದಿಕೇಳಿ ಊರ ಜನರು ಸಹ ಊರನ್ನು ಬಿಟ್ಟು ಹೋಗತೊಡಗಿದರು.

"ಮನೆ ಬಾಡಿಗೆಯಿಂದ ಕೊಡುತ್ತೇವೆ" ಎಂಬ ಬಹುದೊಡ್ಡ ಅಕ್ಷರ ಗಳಿಂದ ಬರೆದ ಫಳಿಯನ್ನು ಕಂಪೌಂಡಿನ ಗೋಡೆಯ ಹತ್ತಿರ ಹಚ್ಚಿಸ ಲಾಯಿತು.

ಎಷ್ಟೋ ದಿನಗಳಾದರೂ ಯಾರ ಸುದ್ದಿಯೂ ಇಲ್ಲ.

ಸಾಥಿ ಶಿವರಾಯರು ಮನೆಗಳನ್ನೆಲ್ಲಾ ನೋಡಿಕೊಂಡು ಆವಾರದಲ್ಲಿ ವಿರಾಮ ಕುರ್ಚಿಯ ಮೇಲೆ ಒರಗಿದರು. ಲೋಕೋಪಕಾರಕ್ಕಾಗಿ ಬಾಡಿಗೆ ಅರ್ಧ ಇಳಿಸಿದರೆ ಇದರ ಫಲ ಏನಾಯಿತಲ್ಲ? ಎಂದು ಚಿಂತಿಸಿದರು.

ಭವ್ಯವಾಗಿರುವ ಕಟ್ಟಡದ ಸುತ್ತುಮುತ್ತು ಸ್ಮಶಾನದ ಶಾಂತತೆ ಇತ್ತು. ಎಲ್ಲಿ ನೋಡಿದಲ್ಲಿ ಹುಲ್ಲು ಬೆಳೆದಿತ್ತು. ಕಸ ಗುಂಪುಗುಂಪಾಗಿ ಬಿದ್ದಿತ್ತು.

(ಒಂದು ರಶಿಯನ್ ಕತೆಯ ಪ್ರೇರಣೆಯಿಂದ)

# ಆ ರಾತ್ರಿ

ಆ ದಿನ ಮಧ್ಯಾಹ್ನ ವಸಂತನ ಮನೆಯಲ್ಲಿ ಬಹಳ ಗಡಿಬಿಡಿ! ವಸಂತ ತಾನು ಕೂಡುವ ಕೋಣೆಯನ್ನು ಅತ್ಯಂತ ಶಿಸ್ತಿನಿಂದ ಇಡುವ ಕಾರ್ಯದಲ್ಲಿ ಮಗ್ನನಾಗಿದ್ದನು.

ಗಡಿಯಾರದ ಮುಳ್ಳುಗಳು ಎರಡು ಗಂಟೆಯಾದುದನ್ನು ತೋರಿಸಿದವು!

ಸುಧಾ ಕಸಪೊರಕೆಯಿಂದ ಕಸ ಗೂಡಿಸುತ್ತಿದ್ದಳು. ಅವಳನ್ನು ನೋಡಿ "ಏನು ಇನ್ನೂ ಕಸ ಉಡುಗುವುದೇ ಮುಗಿದಿಲ್ಲವೇ?" ಎಂದು ವಸಂತ ಕೇಳಿದ.

"ಈಗಿನ್ನು ಎರಡು ಗಂಟೆ" ಸುಧಾ ಈ ರೀತಿ ಉತ್ತರ ಕೊಟ್ಟಾಗಲೇ ವಸಂತನಿಗೆ ಇನ್ನೂ ವೇಳೆ ಇದೆಯೆಂಬುದರ ಸ್ಮರಣೆ ಬಂದಿತು.

ಅಹುದು; ರೈಲು ನಾಲ್ಕು ಗಂಟೆಗೆ ಬರುವುದು. ರೈಲು ನಿಲ್ದಾಣ ದಿಂದ ಮನೆಗೆ ಬರಲು ಅರ್ಧ ತಾಸು ಹಿಡಿಯುವುದು. ಟಾಂಗಾ ನಾಲ್ಕು ವರೆ ಗಂಟೆಗೆ ಮನೆಗೆ ಬರುವುದು. ಇನ್ನೂ ಎರಡೂವರೆ ತಾಸು!

"ಏನೇ ಆಗಲಿ, ಬೇಗ ಮುಗಿಸಿಬಿಡು. ಅವರು ಬಂದಮೇಲೆ ಹಾಸುತ್ತ ಕೂಡುವುದೇ? ಕುಮಾರನೊಬ್ಬನು ಕೈಬಿಡಬೇಕಲ್ಲ?"

"ಹೂಂ! ಮುಗಿಸುತ್ತೇನೆ. ಏನೋ ಕಾರಣ, ಕುಮಾರ ಮಲಗಿ ದ್ದಾನೆ. ಅಂತೇ ಇಷ್ಟೆಲ್ಲ ಕೆಲಸ ಮಾಡಲು ಅನುಕೂಲ.

"ಏನೋ ಕಾರಣ ಏಕೆ? ಯಾರಾದರೂ ಬರುವವರಿದ್ದರೆ ಕೂಸು ಬಹಳ ಹೊತ್ತು ಮಲಗಿಕೊಳ್ಳುತ್ತವೆ!"

"ಇವೆಲ್ಲಾ ನೀವು ನಂಬುತ್ತೀರಿ?" ಸುಧಾ ನಗುತ್ತ ಜಮುಖಾನೆಯನ್ನು ತೆಗೆದುಕೊಂಡು ಹೊರಗೆ ಹೋದಳು. ವಸಂತ ತನ್ನ ಕೋಣೆಯಲ್ಲಿಯೇ ಇನ್ನೂ ಏನೇನೋ ಮಾಡುತ್ತಿದ್ದನು.

ಛಟ್! ಛಟ್!!

ಜಮಖಾನೆ ಝಾಡಿಸುವುದರ ಸಪ್ಪಳ ಕೇಳಬಂತು. ಕೂಡಲೇ ಸುಧಾ ವಸಂತನ ಕೋಣೆಯಲ್ಲಿ ಕಂಡಳು. "ಅಯ್ಯೊ! ಬಂದೇ ಬಿಟ್ಟರು! ನನ್ನ ಕೆಲಸ ಇನ್ನೂ ಹಾಗೇ ಇದೆ!"

ವಸಂತ ಬಹಳ ಅಚ್ಚರಿಯಿಂದ ಖುರ್ಚಿಯಿಂದ ಎದ್ದು "ನಿಜವೆ? ನಿಜವೆ?? ನಿಜವೆ??" ಎಂದು ಕೇಳಿದನು.

ವಸಂತನ ಮಾತು ಮುಗಿಯುವಷ್ಟರಲ್ಲಿಯೆ ಸುಧಾ ಒಳಗೆ ಮಾಯ ವಾದಳು.

"ಏನ್ರಿ ವಸಂತರಾವ್! ಜಮಖಾನೆಯ ಧೂಳಿಯಿಂದ ನಮ್ಮನ್ನು ಸ್ವಾಗತಿಸಿದಿರಲ್ಲಾ?"

ಈಶ್ವರನ್ನನ ಮಾತಿನ ಅರ್ಥ ವಸಂತನಿಗೆ ಕೂಡಲೇ ಆಯಿತು. ಇಬ್ಬರೂ ನಕ್ಕರು.

"ಈಶ್ವರನ್, ಈಗ ಎರಡೂವರೆ ಗಂಟೆ! ರೈಲು ಇಷ್ಟು ಬೇಗ ಬಂದು ಬಿಟ್ಟಿತೇ?"

" ಹೃದಯವೊಂದು ಕೇಳಬೇಕಲ್ಲ ?"

ಇಬ್ಬರೂ ಒಬ್ಬರೊಬ್ಬರ ಕೈಕುಲುಕಿ ಬಹಳ ಹರ್ಷದಿಂದ ನಕ್ಕರು.

" ನಿಮ್ಮ......ಇವರು........ಎಲ್ಲಿ ?" ವಸಂತ ಕುತೂಹಲದಿಂದ ಪ್ರಶ್ನೆ ಕೇಳುತ್ತಿರುವಾಗಲೇ, ಈಶ್ವರನ್ ಹೇಳಿದ " ಓಹೋ ! ಅವರು ಈಗಾಗಲೇ ಅಡುಗೆ ಮನೆಯನ್ನು ಸೇರಿದ್ದಾರೆ. ಅವರೇನು ಹೆಂಗಸರು ! ನಮ್ಮನ್ನು ಬಿಟ್ಟು ನಮ್ಮ ಪಾಲಿನ ಉಂಡಿಗಳನ್ನು ತಿನ್ನುತ್ತಿರಬಹುದು !" ಮತ್ತೆ ಇಬ್ಬರೂ ಗಹಗಹಿಸಿ ನಕ್ಕರು !

" ಅಲ್ಲ, ಅಕ್ಕನಿಗೆ ನಮ್ಮ ಸುಧಾಳ ಪರಿಚಯ ಮಾಡಿಕೊಡಬೇಕು !"

" ನೀನೇನೂ ಚಿಂತಿಸಬೇಡ ಅವಳು ಕಲ್ಲನ್ನು ಸಹ ಮಾತನಾಡಿಸು ವವಳು !"

ನಗುತ್ತ ಎಲ್ಲ ಮಾತುಕತೆ ಸಾಗಿದವು. ಒಳಗೆ ಹೋಗಿ ಉಂಡಿಗಳನ್ನು ನುಂಗುವದಾಯಿತು. ಉಪ್ಪಿಟ್ಟನ್ನು ತಿನ್ನುವದಾಯಿತು. ಚಹವನ್ನು ಕುಡಿಯುವದಾಯಿತು. ತುಟಿಗಳನ್ನು ಒರೆಯಿಸಿಕೊಂಡು ತಾಂಬೂಲ ಸೇವನೆ ಸಾಗಿತು. ಮನೆತನದ ಕ್ಷೇಮ ಸಮಾಚಾರದ ಮಾತುಕತೆಗಳೂ ಆರಂಭವಾದವು.

ಕೋಣೆಯಲ್ಲಿ ಊದಿನ ಕಡ್ಡಿಗಳನ್ನು ಹಚ್ಚಿದ್ದರು. ಕಡ್ಡಿಗಳಿಂದ ಹೊಗೆ ಮೇಲೆ ಹೋಗಿ ಅನೇಕ ಆಕಾರಗಳನ್ನು ತಳೆದು ಮಾಯವಾಗುತ್ತಿತ್ತು. ಆ ಹೊಗೆ ಎಲ್ಲ ಕಡೆಗೂ ಸುವಾಸನೆಯನ್ನು ಪಸರಿಸಿತ್ತು. !

ಈಶ್ವರನ್ ಮತ್ತು ವಸಂತರ ಮಾತು ಕತೆಗಳೂ ಅನೇಕ ರೂಪಗಳನ್ನು ತಾಳುತ್ತಿದ್ದವು. ಸ್ನೇಹದ ಪರಿಮಳ ಅಪರಿಮಿತ ಆನಂದವನ್ನು ದಯಪಾಲಿಸಿತ್ತು !

ನಡುವೆ ಅಕ್ಕ ಬಂದು ಉಮೇಶನನ್ನು ಕೊಟ್ಟು "ಹೋಗೋಣವೇನು?" ಎಂದು ಸೊನ್ನೆ ಮಾಡಿದಳು.

ಹೆಂಡತಿಯ ಸೂಚನೆಯಿಂದ ಒಮ್ಮೆಲೆ ಎಚ್ಚರಾದಂತವನಾಗಿ ಈಶ್ವರನ್ ಹೇಳಿದ "ಹೌದು ವಸಂತ; ನಾವೀಗ ಹೊರಡಬೇಕು"

"ಛೇ, ಈ ದಿನ ನಿಮ್ಮನ್ನು ಬಿಡುವುದು ಸಾಧ್ಯವೇ ಇಲ್ಲ."

"ಇಲ್ಲ, ನನಗೆ ಬಹಳ ಕೆಲಸಗಳಿವೆ, ಬಿಟ್ಟುಬಿಡು"

"ರವಿವಾರ ! ಸೂಟಿ!!........ಈ ದಿನ ಏನೂ ಕೆಲಸಮಾಡಬಾರದು"

"ವಸಂತ, ನಮಗೆಲ್ಲಿಯ ರವಿವಾರ ?........ಸರಕಾರಿ ಕೆಲಸವೆಂದರೆ ಹೀಗೆಯೆ. ಹಗಲೂ ರಾತ್ರಿ ಕೆಲಸ ! ಬಿಡುವೇ ಇರುವ ಹಾಗಿಲ್ಲ"

"ನೀನು ಏನೇ ಅನ್ನು ಈಶ್ವರನ್ ! ನಾನು ನಿನ್ನನ್ನು ಬಿಡುವುದು ಸಾಧ್ಯವೇ ಇಲ್ಲ. ಈಗ ನನ್ನ ಪರವಾನಗೆ ಅಲ್ಲದೆ, ಒಳಗಿನ ಪರವಾನಗೆಯೂ ಬೇಕು. ಈಗ ನಾನೊಬ್ಬನೇ ಇಲ್ಲ."

"ಒಳಗಿನ ಪರವಾನಗೆ ಅಲ್ಲದೇ, ನಿಮ್ಮ ರಾಜಕುಮಾರನ ಅಪ್ಪಣೆಯೂ ಬೇಕಲ್ಲ."

ಒಳಗೆ ಕುಮಾರ ಅಳಹತ್ತಿದನು !

ಎಲ್ಲರೂ ಒಳಗಿನ ಸಭೆಯಲ್ಲಿ ಕೂಡಿ, ಊರಿಗೆ ಹೊರಡಬಾರದೆಂಬ ನಿರ್ಣಯಕ್ಕೆ ಬಂದರು.

ರಾತ್ರಿ ಊಟವಾದ ಮೇಲೆ ಈಶ್ವರನ್ ಮತ್ತು ವಸಂತ ಒಂದು ಕೋಣೆಯಲ್ಲಿ ಮಲಗಿದರು. ತಮ್ಮ ಹಿಂದಿನ ಜೀವನವನ್ನೆಲ್ಲ ನೆನೆಯಿಸಿ ಕೊಂಡರು. ಕಾಲೋಜದಲ್ಲಿ ಅಭ್ಯಾಸ ಮಾಡುವಾಗ ಇದೇ ರೀತಿಯಾಗಿ ಅವರು ಒಂದೇ ಕೋಣೆಯಲ್ಲಿ ಇದ್ದವರು; ಕೂಡಿ ಓದಿದ್ದವರು; ಕೂಡಿ ನಲಿದವರು; ಕೂಡಿ ಓದಿದವರು....... ಈಗ ಎಷ್ಟು ಆನಂದ !!

ಅಕ್ಕಾ ಮತ್ತು ಸುಧಾ ಬೇರೆ ಕೋಣೆಯಲ್ಲಿ ಮಲಗಿದರು. ಅವರಿಬ್ಬರದೂ ಹೊಸ ಪರಿಚಯ. ಆದರೂ ಹತ್ತಿರದ ಬಳಗದವರಂತೆ ಮಾತನಾಡಿದರು.

ರಾತ್ರಿ ಒಮ್ಮೆಲೆ ಉಮೇಶ ಕೆಮ್ಮಹತ್ತಿದನು. ಕೆಮ್ಮು ಸ್ವಲ್ಪ ಜೋರಾಗಿಯೇ ಬಂದಿತು. ಆ ಕೆಮ್ಮಿನಿಂದ ಸುಧಾ ಎಚ್ಚತ್ತಳು. “ಯಾಕೆ ? ಕೆಮ್ಮುತ್ತಿದೆಯಲ್ಲ ?? ” ಎಂದು ಕೇಳಿ ಮಗುವನ್ನು ಉಪಚರಿಸಿದಳು. ನೀಲಗಿರಿ ಎಣ್ಣೆ ತಂದು, ಎದೆಗೆಲ್ಲ ಸವರಿದಳು. ಅರ್ಧ ತಾಸಿನ ನಂತರ ಕೆಮ್ಮು ಕಡಿಮೆಯಾದಂತಾಗಿ ಉಮೇಶ ಮಲಗಿದ. ಅಕ್ಕ ಮತ್ತು ಸುಧಾ ಇಬ್ಬರೂ ನಿದ್ರೆಹೋದರು.

ಆ ರಾತ್ರಿ ಜಮಖಾನೆಯ ಮೇಲೆ ಮಲಗಿದ್ದರೂ, ಗಾಢ ನಿದ್ರೆ ಅವರನ್ನು ಆವರಿಸಿತು. !

ಈಶ್ವರನ್ ಊರಿಗೆ ಹೋದ ಮೇಲೆ, ೫-೬ ದಿನಗಳಲ್ಲಿಯೇ ಉಮೇಶನಿಗೆ ಗುಣವಾಯಿತು. ಅವನು ಎದ್ದು ಆಡತೊಡಗಿದನು.

ಮುಂಜಾನೆ ಹತ್ತು ಗಂಟೆ ! ಅಂಚೆಯವನು ಟಪಾಲು ಒಗೆದು ಹೋದನು. ಈಶ್ವರನ್ ಒಂದೊಂದೇ ಪತ್ರವನ್ನು ತೆಗೆದು ನೋಡುತ್ತಿದ್ದ. ಹಾಗೆ ಒಂದು ಪತ್ರವನ್ನು ನೋಡುತ್ತಲೆ, ಅವನ ಮುಖ ಒಮ್ಮೆಲೆ ಖಿನ್ನವಾಯಿತು.

" ಏನು ಅದು ? ಯಾರ ಪತ್ರ ? ಮುಖ ಹೀಗೇಕೆ ಮಾಡಿದಿರಿ ?" ಅಕ್ಕಾ ಒಮ್ಮೆಲೆ ಪ್ರಶ್ನೆಗಳ ಸುರಿಮಳೆಗರೆದಳು.

" ನಾನು ಈದಿನ ರಾತ್ರಿ ಹೋಗಿ, ಬೆಳಿಗ್ಗೆ ಬರುವೆ !"

" ಎಲ್ಲಿಗೆ ಹೋಗುವಿರಿ ?"

" ವಸಂತನ ಪತ್ರ ಬಂದಿದೆ "

" ಯಾರಿಗೆ ಏನಾಗಿದೆ ?"

" ಕುಮಾರನಿಗೆ ಕೆಮ್ಮು ಜ್ವರ ಬಹಳವಂತೆ !"

" ಪಾಪ ! ನಾವು ಮೊನ್ನೆ ಹೋದಾಗ ಎಷ್ಟು ಆಟವಾಡುತ್ತಿತ್ತು !" ವಾತ್ಸಲ್ಯದಿಂದ ಅಕ್ಕಾ ನುಡಿದಳು.

ವಸಂತನಿಗೂ ಈಶ್ವರನ್‌ನಿಗೂ ಹತ್ತು ಮೈಲು ಅಂತರ! ಈಶ್ವರನ್ ಅದೇ ರಾತ್ರಿ ವಸಂತನ ಕಡೆಗೆ ಹೋಗಿ ಕುಮಾರನನ್ನು ನೋಡಿಕೊಂಡು ಬಂದನು. ಈಶ್ವರನ್ ಬಾಗಿಲಲ್ಲಿ ಕಾಲಿಡುತ್ತಲೆ ಅಕ್ಕ ಕೇಳಿದಳು. "ಹೇಗಿದೆ ಮಗು?" ಎಂದು.

"ವಸಂತ ಗಾಬರಿ ಮನುಷ್ಯ! ಕೆಮ್ಮಿನ ಜೊತೆಗೆ ಸ್ವಲ್ಪ ನಿಮೋನಿಯಾ ಕೂಡಿಕೊಂಡಿದೆ! ಬೇಗ ಗುಣವಾಗಬಹುದೆಂದು ಡಾಕ್ಟರ ಹೇಳಿದ್ದಾರೆ. ಆದರೂ ಕಾಳಜಿಯಿಂದ ಇರಬೇಕು. ಇಕೋ ಏನಾದರೂ ಪತ್ರ ಬಂದರೆ, ನನಗೆ ತಿಳಿಸು."

"ಮತ್ತೆ ನೀನೇ ಇರುವಾಗ...?"

"ಇಲ್ಲ, ನಾಳಿನಿಂದ ನಾನು ಫಿರತಿಮೇಲೆ ಹೋಗಬೇಕು. ೧೫—೨೦ ದಿನ ಬರಲಿಕ್ಕಿಲ್ಲ...."

ಈಶ್ವರನ್ ಫಿರತಿಮೇಲೆ ಹೋದನು. ಅವನು ತನ್ನ ಕೆಲಸ ಮುಗಿಸಿ ಕೊಂಡು ತಿರುಗಿ ಬರುವಷ್ಟರಲ್ಲಿಯೇ, ಕುಮಾರನ ಸುದ್ದಿಯನ್ನು ಕೇಳಿ, ವಜ್ರಾಘಾತವಾದಂತಾಯಿತು. ಮಮ್ಮಲನೇ ಮರುಗಿದನು.

ಈಶ್ವರನ್ ಮತ್ತು ಅಕ್ಕ ಕೂಡಿ, ವಸಂತನ ಮನೆಗೆ ಹೋದರು ಕುಮಾರನಿಗೆ ಬಂದ ಕೆಮ್ಮು ಜೋರಾಗಿ, ಮಗುವಿನ ಜೀವವನ್ನು ತೆಗೆದು

ಕೊಂಡು ಹೋಗಿದ್ದಿತು. ಹಗಲು ರಾತ್ರಿ ಕೆಮ್ಮಿ ಸಂಕಟಪಟ್ಟ ಮಗುವಿನ ಸುದ್ದಿಯನ್ನು ಕೇಳಿ ಈಶ್ವರನ್ ಮತ್ತು ಅಕ್ಕ ಬಹಳ ದುಃಖಬಟ್ಟರು.

ಸುಧಾ ಏನೂ ಮಾತನಾಡಲಿಲ್ಲ. ಬಿಕ್ಕಿ ಬಿಕ್ಕಿ ಅತ್ತಳು. ಅಕ್ಕ ಅಲ್ಲಿಯೇ ೨—೩ ದಿನ ನಿಂತುಕೊಂಡು, ಸುಧಾಳನ್ನು ಸಂತೈಸಿದಳು. ಸುಧಾ ಒಂದೇ ಸವನೆ ದುಃಖಬಟ್ಟಳು. ಏನೂ ಮಾತನಾಡಲಿಲ್ಲ!!

ಈ ಘಟನೆ ಸಂಭವಿಸಿ ಹಲವು ದಿನಗಳು ಉರುಳಿದವು. ದಿನಗಳು ದುಃಖವನ್ನೇ ತಾವೇ ಮರೆಮಾಡಿದವು.

ಒಂದು ದಿನ ಬೆಳಗಿನಲ್ಲಿ ವಸಂತನು ಅತ್ಯಾನಂದದಿಂದ ಒಂದು ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಒಳಗೆ ಬಂದನು. ಆವನಿಂದ ಒಂದು ಕ್ಷಣ ಮಾತುಗಳೇ ಅವನ ಬಾಯಿಂದ ಹೊರಡದಾದವು.

“ನೋಡು ಸುಧಾ, ಈಶ್ವರನ್ ಅಮೇರಿಕೆಗೆ ಹೋಗುವನಂತೆ! ಸರಕಾರದವರು ಕಳಿಸುವರಂತೆ!”

ಸುಧಾ ಮುಗುಳುನಗೆ ನಕ್ಕಳು!

“ಈಶ್ವರನ್ನದು ಸುದೈವ! ಅವನ ಜಾಣತನ ನನಗೆ ಗೊತ್ತಿತ್ತು! ಕಾಲೇಜದಲ್ಲಿಯೆ ನಾನು ಭವಿಷ್ಯ ಹೇಳಿದ್ದೆ. ಇನ್ನೇನು ಅವನು ಶಿಕ್ಷಣ ಖಾತೆಯಲ್ಲಿ ದೊಡ್ಡ ಇನಸ್ಪೆಕ್ಟರ ಆಗಬಹುದು.”

ಸುಧಾ ಮತ್ತೆ ಮುಗುಳುನಗೆ ನಕ್ಕಳು!

“ನಾನು ಮುಂಬೈವರೆಗೂ ಹೋಗಿ ಕಳಿಸಿಬರುತ್ತೇನೆ. ನೀನೂ ಬರುವಿ ಏನು?”

ಸುಧಾ ಸುಮ್ಮನಿದ್ದಳು!!!

ವಸಂತ ಮಾತು ಬದಲಿಸಬೇಕಾಯಿತು. “ಏಕೆ ಸುಧಾ, ಎಷ್ಟು ಸುಮ್ಮನಿರುವಿಯಲ್ಲ ?”

“ಅವರು ಅಮೇರಿಕೆಗೆ ಹೋದರೆ ನಮಗೇನು ?”

" ಗೆಳೆಯ ಹೋದರೆ ಆನಂದವಿಲ್ಲವೆ ? ಛೀ ಹುಚ್ಚಿ, ನಿನಗೆ ಸ್ನೇಹ ಅಂದರೇನೆ ಗೊತ್ತಿಲ್ಲ. ನನ್ನ ಜಾತಿ ಬೇರೆ, ಅವನ ಜಾತಿ ಬೇರೆ. ನನ್ನ ವಿಷಯ ಬೇರೆ, ಅವನ ವಿಷಯ ಬೇರೆ. ನನ್ನ ಆಶೆ ಬೇರೆ, ಅವನ ಆಶೆ ಬೇರೆ. ಆದರೂ ಅವನು ನಮ್ಮನ್ನು ಎಷ್ಟು ಹಚ್ಚಿಕೊಂಡಿದ್ದಾನೆ. ?"

" ಗಂಡಸರದು ನಮಗೆ ಏನೂ ಗೊತ್ತಿಲ್ಲ. ನೀವು ಹೋಗಿ ಬನ್ನಿ"

ಸುಧಾಳ ಮಾತುಗಳನ್ನು ಕೇಳಿ, ವಸಂತನಿಗೆ ನಿರುತ್ಸಾಹವಾಯಿತು. ರಾತ್ರಿ ಏಕಾಂತದಲ್ಲಿ ಅವಳನ್ನು ರಮಿಸುತ್ತ ಮೃದುವಾಗಿ ಮಾತನಾಡಿಸಿದ ವಸಂತ- " ಸುಧಾ ಹೀಗೇಕೆ ಮಾಡುತ್ತಿರುವೆ ?"

" ನಾನೇನು ಮಾಡಿದ್ದೇನೆ ನಿಮಗೆ ? ಬೇಕಾದರೆ ಹೋಗಿರಿ ಎಂದು ಆಗಲೇ ಹೇಳಿರುವೆ. "

" ಹಾಗಲ್ಲ .........? "

" ನೀನು ನನ್ನ ಬಗ್ಗೆ ಚಿಂತಿಸುವುದೇ ಇಲ್ಲ. ಕುಮಾರನ ಬಗ್ಗೆಯೂ ಹಾಗೆಯೇ ಮಾಡಿದಿರಿ. ಮೊದಲನೆಯ ಸಲ ಅವರು ಇಲ್ಲಿಗೆ ಬಂದಾಗ, ನೀವು ನನ್ನನ್ನು ಬಿಟ್ಟು ಏಕೆ ಮಲಗಿದಿರಿ ?"

ಸುಧಾ ಒಮ್ಮೆಲೆ ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಆ ಅಳುವನ್ನು ಕೇಳಿದಕೂಡಲೆ, ವಸಂತನ ಎದೆ ನಡುಗಿತು. ಅವನು ಹೆಚ್ಚಿಗೆ ಮಾತನಾಡಲಿಲ್ಲ.

ತಾನು ಮತ್ತು ಈಶ್ವರನ್ ಕೂಡಿ ಒಂದು ನದಿಯಾಗಿ ಹರಿದಂತೆ, ತಮ್ಮ ಹೆಂಡಂದಿರೂ ಇರಬೇಕೆಂಬ ಮನಸ್ಸು ಗೆಳೆಯರದು ಆಗಿದ್ದಿತು. ಆದರೆ ಸುಧಾಳ ಮಾತು ಕೇಳಿದ ಕೂಡಲೇ....? ಸುಧಾಳ ಅಳುವಿನ ಅರ್ಥ ವಸಂತನಿಗೆ ಚನ್ನಾಗಿ ಆಗಲಿಲ್ಲ. ಅದು ಅವಳ ಅತಿ ಪ್ರೇಮದ ಚಿಹ್ನವಾಗಿದ್ದಿತೋ ಅಥವಾ ತನ್ನ ಗೆಳೆಯನ ಬಗ್ಗೆ ಮತ್ಸರದ ಗುರುತಾಗಿದ್ದಿತೋ ವಸಂತನಿಗೆ ತಿಳಿಯಲಿಲ್ಲ. ಸುಧಾ ಎಂದಿಗೂ ಈ ರೀತಿಗಾಗಿ ಅತ್ತಿದ್ದಿಲ್ಲ.

ವಸಂತ ತಾನೊಬ್ಬನೇ ಮುಂಬೈಗೆ ಹೋದನು. ವಿಮಾನ ನಿಲ್ದಾಣದಲ್ಲಿ ಭಾರವಾದ ಹೃದಯದಿಂದ ಇಬ್ಬರೂ ಅಗಲಿದರು. ಈಶ್ವರನ್ ಅವೇ

ರಿಕೆಯಿಂದ ತನ್ನ ಅನುಭವಗಳನ್ನೆಲ್ಲ ಬರೆದು ಕಳುಹಿಸುವದಾಗಿ ಹೇಳಿದ. ವಸಂತ ಅವುಗಳನ್ನು ತಾನು ಕೆಲಸಮಾಡುವ ದಿನಪತ್ರಿಕೆಯಲ್ಲಿ ಪ್ರಕಟಿಸು ವದಾಗಿ ಉತ್ತೇಜನವಿತ್ತು ಮಾತನಾಡಿದ. "ನೋಡೋಣ, ಒಂದು ವರ್ಷದಲ್ಲಿ ಅಂಚೆಖಾತೆಗೆ ಎಷ್ಟು ಪ್ರೋತ್ಸಾಹನ ಕೊಡುವಿ ?"

"ನೀನೂ ಹಾಗೆಯೇ ಮಾಡಬೇಕು. ನಿನ್ನ ಸಮಾಚಾರ ಬರೆ. ಬರಿ ನಿನ್ನದಲ್ಲ !........ನಿಮ್ಮವರದೂ ಬರೆಯಬೇಕು. ಮರೆತೀಯಾ ಮತ್ತೆ !" ಈಶ್ವರನ್ ಕೈಯೆತ್ತಿ ಕುಲುಕುಲು ನಗುತ್ತ ಹೇಳಿದ. ವಿಮಾನವು ಆಕಾ ಶದಲ್ಲಿ ಹಾರಿತು !

ಅಕ್ಕ, ಉಮೇಶ ವಸಂತ ಮತ್ತು ಇನ್ನಿತರರು ಹಾರಿ ಹೋಗುವ ವಿಮಾನವನ್ನು ನಿಟ್ಟಿಸಿ ನೋಡಿಯೇ ನೋಡಿದರು.

× × × × ×

"ನೋಡು ಸುಧಾ, ವಸಂತ ತಿರುಗಿ ಬಂದ ಮೇಲೆ ಗ್ಯಾಝುಟೆಡ್ "ಆಫೀಸರ ಆಗುತ್ತಾನೆ !"

"ಅದನ್ನೇ ಕೇಳಿ ಸಂತೋಷಪಡಿರಿ ನೀವು. ನಿಮ್ಮ ಗಾಡಿ ಹಿಂದೆಯೂ ಇಲ್ಲ ಮುಂದೆಯೂ ಇಲ್ಲ."

"ಹಾಗಲ್ಲ ಸುಧಾ, ಸಂತೋಷ ಪಡಬೇಕಾದಾಗ ಪಡಲೇಬೇಕು. ನೋಡು, ಅವರ ಹಳ್ಳಿಯಲ್ಲಿ ಗುಡಾರ ಚೆನ್ನಾಗಿ ನೇಯುವರಂತೆ. ಹೋಗುವ ಮುಂದೆ ಒಂದನ್ನು ಕೊಟ್ಟಿದ್ದಾನೆ, ನೋಡು."

ವಸಂತ ಗುಡಾರ ಬಿಚ್ಚಿ ತೋರಿಸಿದ. ಸುಧಾ ಮನಸ್ಸಿಲ್ಲದವರಂತೆ, ಅದರ ಕಡೆಗೂ ನೋಡಿದಳು.

ಟ್ರಂಕಿನಿಂದ ಮತ್ತೆ ಹಲವು ಸಾಮಾನುಗಳನ್ನು ಉತ್ಸಾಹದಿಂದ ತೆರೆ ಯುತ್ತ, ವಸಂತ ಹೇಳಿದ "ಅಕ್ಕ ನಿನ್ನ ಸಲುವಾಗಿ ಈ ಬ್ಲಾಜ ಪೀಸ ಕೊಟ್ಟಿದ್ದಾಳೆ. ; ಮುಂಬೈ ಫ್ಯಾಶನ್ನಿನವು."

ಸುಧಾಳ ನೋಟ ಬದಲಾಯಿತು. ಆ ಬಟ್ಟೆಗಳನ್ನು ಅವಳು ತುಚ್ಛ ಮಾಡಿ ಬಿಟ್ಟಳು. "ನಾವೇನು ಭಿಕಾರಿಗಳೇ ?.......ಕೊಳ್ಳಲಿಕ್ಕೆ ಬರುತ್ತಿದ್ದಿ ತಲ್ಲ. ?"

ಸುಧಾಳ ಮಾತು ವಸಂತನ ಮನಸ್ಸಿಗೆ ಏನೂ ರುಚಿಸಲಿಲ್ಲ. ಛೀ, ಸುಧಾ, ಬಡತನ, ದೊಡ್ಡಸ್ತಿಕೆ ಇವುಗಳನ್ನು ತೆಗೆದುಕೊಂಡು ಏನು ಮಾಡುವಿ ? ಮುಖ್ಯ ಅವರು ನಮ್ಮ ಬಗ್ಗೆ ಎಷ್ಟು ಅಭಿಮಾನ ಪಡುತ್ತಾರೆ, ಇದನ್ನು ನೋಡು.......ಅಕ್ಕ ತಾವಾಗಿಯೇ ಇಲ್ಲಿಗೆ ಬರುವವರಿದ್ದರು...."

"ಏನೆಂದಿರಿ ?" ಸುಧಾ ಚಕಿತಳಾಗಿ ಸರಕ್ಕನೇ ಕೇಳಿದಳು.

"ಅಕ್ಕ ಬರುವವರಿದ್ದರು. ಆದರೆ ಮನೆಯಲ್ಲಿ ಕೆಲಸ ಬಿದ್ದದ್ದರಿಂದ...."

"ಈಗಂತೂ ಬರಲಿಲ್ಲವಲ್ಲ............!!" ಸುಧಾ ನಿಟ್ಟುಸಿರು ಬಿಟ್ಟು ಆಡಿದ ಮಾತುಗಳಲ್ಲಿ ಅಕ್ಕಳ ಬಗ್ಗೆ ಇರುವ ಅಸಮಾಧಾನ ಒಡೆದು ಕಾಣುತ್ತಿತ್ತು.

ಸುಧಾಳಿಗೆ ಯಾವುದೇ ವೇದನೆ ಒಮ್ಮೆಲೇ ಉಂಟಾಯಿತು. ಆದಿನ ತಲೆ ಬಹಳ ಹೊಡೆಯತೊಡಗಿತು. ಕೆಲಸ ಮಾಡದಂತವಳಾಗಿ ಮಧ್ಯಾಹ್ನದಲ್ಲಿ ಮಲಗಿಕೊಂಡುಬಿಟ್ಟಳು.

ವಸಂತ ಅವಳ ತಲೆ ಒತ್ತಿದ! ನೀಲಗಿರಿ ಎಣ್ಣೆಯನ್ನಾದರೂ ಹಚ್ಚಬೇಕೆಂದು, ಅವನು ಎದ್ದುಹೋಗಿ ಬಾಟ್ಲಿಯನ್ನು ತೆಗೆದುಕೊಂಡು ಬಂದ. ಆ ಬಾಟ್ಲಿಯನ್ನು ನೋಡಿದ ಕೂಡಲೆ ಸುಧಾ "ಬೇಡ ಬೇಡ" ಎಂದು ಚೀರಿಕೊಂಡಳು !

ವಸಂತನಿಗೆ ಅರ್ಥವಾಗದ ಹಾಗಾಯಿತು. ಸುಧಾಳ ಸ್ವಭಾವವನ್ನು ನೋಡಿ ಹೌಹಾರಿದನು. ಅವಳನ್ನು ಬೇಕಾದಷ್ಟು ರಮಿಸಿದನು. ಆದರೆ ಅವಳು ತನ್ನ ಮನೋಗತವನ್ನು ಹೇಳಲೇ ಇಲ್ಲ.

ಸುಧಾ ಎಷ್ಟು ಮನಬಿಚ್ಚಿ ಮಾತನಾಡುತ್ತಿದ್ದಳು. ಆದರೆ ಈಗಿನ ಅವಳ ಮನಸ್ಥಿತಿಯನ್ನು ನೋಡಿದರೆ, ವಸಂತನಿಗೆ ಹೇಗೋ ಅನಿಸುತ್ತಿತ್ತು. ಮದುವೆಯಾಗಿ ಐದು ವರ್ಷವಾಗಿಲ್ಲ. ಇಷ್ಟರಲ್ಲಿ ಬಾಳಿನ ಕಹಿ ಫಲವನ್ನು

ಹೇಗೆ ತಿನ್ನಬೇಕು ? ಸುಧಾಳ ಮನಸ್ಸಿಗೆ ತ್ರಾಸವಾಗಬಾರದೆಂದು ವಸಂತ ಆದಷ್ಟು ಅವಳ ಹೇಳಿಕೆಯಂತೆಯೆ ನಡೆಯುತ್ತ ಹೋದ.

ಹಲವು ದಿನಗಳ ತರುವಾಯ ಅಕ್ಕ ಏನೂ ಸುದ್ದಿಯನ್ನು ತಿಳಿಸದೆ ವಸಂತನ ಮನೆಗೆ ಬಂದಳು !

ಸುಧಾ ಯಾವ ರೀತಿಯಿಂದಲೂ ಅವಳನ್ನು ಸ್ವಾಗತಿಸಲಿಲ್ಲ. ಅವಳ ಮಾತೂ ಕಡಿಮೆ ಇದ್ದವು. ವಸಂತನೊಬ್ಬನೇ ಹೆಚ್ಚಾಗಿ ಮಾತನಾಡಿದನು.

ಈಶ್ವರನ್‌ನ ಪತ್ರ ಬಂದುದರಿಂದ ಅಕ್ಕ ಇವರಲ್ಲಿ ಹಲವುದಿನ ಇದ್ದು ಹೋಗಲು ಬಂದಿದ್ದಳು.

ಮಧ್ಯಾಹ್ನ ಊಟವಾದ ಮೇಲೆ ಅಕ್ಕ ಮತ್ತು ಸುಧಾ ಒಂದೇ ಕೋಣೆಯಲ್ಲಿ ಕುಳಿತುಕೊಂಡಿದ್ದರು.

ಉಮೇಶ ಪುಟ್ಟ ಪಾದಗಳನ್ನಿಡುತ್ತ ಆಟವಾಡುತ್ತಿದ್ದ. ಅಕ್ಕ ಅವನನ್ನು ಆಡಿಸುತ್ತಿದ್ದಳು. ಆದರೆ ಸುಧಾಳ ಲಕ್ಷ್ಯ ಹೊರಗೇ ಇದ್ದಿತು.

ಹೊರಗೆ ಹಿತ್ತಲದಲ್ಲಿ ಒಂದು ಬೆಕ್ಕು ಓಡಾಡುತ್ತಿತ್ತು. ಅದು ಒಂದೇ ಸವನೆ ಕೆಟ್ಟಧ್ವನಿ ತೆಗೆದು ಒದರುತ್ತಿತ್ತು !

" ಪಾಪ ! ಅದರ ಮರಿಗಳನ್ನು ಒಂದು ಬಾವುಗ ನಿನ್ನೆ ಎತ್ತಿಕೊಂಡು ಹೋಯಿತು." ಎಂದು ಅದನ್ನು ನೋಡಿದವರೊಬ್ಬರು ಕನಿಕರದಿಂದ ಅಂದರು "ತಾಯಿಯ ಹೃದಯ! ಪಾಪ! ಎಷ್ಟು ಅಳುತ್ತಿದೆ" ಎಂದು ಮತ್ತೆ ನುಡಿದರು.

ಸುಧಾಳ ಕಣ್ಣುಗಳಲ್ಲಿ ನೀರೊಡೆದವು. ಕುಳಿತಲ್ಲಿಯೇ ಸುಧಾ ಅಳ ಹತ್ತಿದಳು ! ವಸಂತ ಅಕ್ಕ ಎಲ್ಲರೂ ಮಾತನಾಡಿಸಿದರು. ಅವಳು ಉತ್ತರಕೊಡಲಿಲ್ಲ. ಅವಳ ದುಃಖ ಹೆಚ್ಚಾಗಿ, ಅವಳ ಹೃದಯ ಹಾರುತ್ತಿತ್ತು.

ಅಕ್ಕ ಅದೇ ದಿನ ಸಂಜೆ ಊರಿಗೆ ಹೋಗಿಬಿಟ್ಟಳು ? ವಸಂತನಿಗೆ ಖೇದವೆನಿಸಿತು !

ಈಶ್ವರನ್ ಅಮೇರಿಕೆಯಿಂದ ಅಲ್ಲಿಯ ತನ್ನ ಅನುಭಗಳನ್ನೆಲ್ಲ ಕಾಗದದಲ್ಲಿ ಬರೆಯುತ್ತಿದ್ದ. ಅವುಗಳನ್ನು ವಾರಕ್ಕೊಮ್ಮೆ ವಸಂತ ದಿನಪತ್ರಿಕೆ

ಯಲ್ಲಿ ಪ್ರಕಟಿಸುತ್ತಿದ್ದ. ಆ ಪತ್ರಗಳನ್ನೆಲ್ಲ ಓದುವ ಮುಂದೆ ವಸಂತನಿಗೆ ಆನಂದವೆನಿಸುತ್ತಿತ್ತು. !

ಅಕ್ಕ ಊರುಬಿಟ್ಟು ಹೋದ ಮರುದಿನ ಈಶ್ವರನ್‌ನ ಪತ್ರ ಬಂದಿತು. ಪಾಕೀಟಿನ ಮೇಲೆ " ಸಂಪೂರ್ಣವಾಗಿ ಆತ್ಮೀಯ " ಎಂದು ಬರೆದಿದ್ದಿತು. ಬಹಳ ಅಚ್ಚರಿಬಟ್ಟು, ಆ ಪತ್ರವನ್ನು ತೆರೆದು ವಸಂತ ಸಂಪೂರ್ಣವಾಗಿ ಓದಿದ.

ಸ್ವಚ್ಛವಾದ ಆಕಾಶದಲ್ಲಿ ಒಮ್ಮೆಲೇ ಮೋಡಗಳು ಕವಿಯುವವು. ಬಿರು ಗಾಳಿ ಬೀಸುವುದು, ಪೃಥ್ವಿಯ ಮುಖದ ಆಕಾರವೇ ಬದಲಾಗುವದು ! ವಸಂತನ ಸ್ಥಿತಿಯೂ ಈ ರೀತಿಯದಾಗಿತು ! ಅವನಿಗೆ ಏನು ಮಾಡ ಬೇಕೋ ತಿಳಿಯದಾಯಿತು !

ತನ್ನ ಮನಸ್ಸಿಗೆ ಆನಂದವಾಗಬೇಕೆಂದು ಅಕ್ಕ ವಸಂತನ ಮನೆಗೆ ಬಂದಿದ್ದಳು. ಅಕ್ಕಳಿಗೆ ತಂದೆ-ತಾಯಿಗಳಿಲ್ಲ. ತವರುಮನೆಯೂ ಇಲ್ಲ. ಮಾವನ ಮನೆಯಲ್ಲಿದ್ದು ಬೆಳೆದವಳು ಏನೋ ಸುದೈವದಿಂದ ಅವಳಿಗೆ ಉತ್ತಮ ನೌಕರಿಯಿದ್ದ ಜಾಣ ಪತಿಯು ದೊರಕಿದನು. ಆದರೆ ಇವರ ವಿವಾಹ ಮನಸ್ಸಿಗೆ ಬಾರದಿದ್ದುದರಿಂದ, ಈಶ್ವರನ್ನನ ತಂದೆ-ತಾಯಿಗಳಿಗೆ ಸೊಸೆಯನ್ನು ಕಂಡರೆ ಆಗುತ್ತಿರಲಿಲ್ಲ. ಅವರ ಕಾಟವನ್ನು ತಪ್ಪಿಸಿಕೊಳ್ಳಲು ವಸಂತನ ಮನೆಗೆ ಬಂದಿದ್ದಳು.

ಪತ್ರದ ಸಂಗಡವೇ ಈಶ್ವರನ್ ನೂರು ರೂಪಾಯಿಯ ಚೆಕ್ಕನ್ನು ಇಟ್ಟಿದ್ದನು. ಆದರೆ ಅಕ್ಕ ಬಂದು ತನ್ನ ಮನೆಯಲ್ಲಿ ಇರುವದೆಂದರೆ, ಸುಧಾಳ ಮನಸ್ಸಿಗೆ ಬರುವಹಾಗಿಲ್ಲ.

ವಸಂತನಿಗೆ ಏನೂ ತೋಚದಾಯಿತು ! ತನ್ನ ಈ ನಡತೆಯಿಂದ ಈಶ್ವರನ್ ಏನು ತಿಳಿದುಕೊಳ್ಳುವನೋ ! ಗೆಳೆತನದ ಗೋಪುರವು ಕಳಚಿ ಒಮ್ಮೆಲೆ ತಲೆಯ ಮೇಲೆ ಬಿದ್ದಂತಾಯಿತು !... ಏನೇ ಆದರೂ, ಸುಧಾಳ ಇಚ್ಛೆಯಂತೆ ಇರುವುದೇ ಅವನಿಗೆ ಒಳಿತೆಂದು ತೋರಿತು.

ಹಾ ! ಹಾ ! ಎಂಬುವಷ್ಟರಲ್ಲಿ ಒಂದು ವರುಷ ಉರುಳಿಹೋಯಿತು. ಈಶ್ವರನ್ ಪರದೇಶದಿಂದ ಮರಳಿಬಂದನು. ವಿಮಾನ ನಿಲ್ದಾಣದಲ್ಲಿಯೆ

ವಸಂತನ ಮುಖವನ್ನು ನೋಡಿ ಸಂತಸಪಡುವನೆಂದು ತಿಳಿದುಕೊಂಡಿದ್ದ. ಆದರೆ ಅಲ್ಲಿ ವಸಂತ ಬಂದಿರಲೇ ಇಲ್ಲ. ಆಗ ಈಶ್ವರನ್ ಮುಂಬೈಯಿಂದಲೇ ಒಂದು ಕಾಗದ ಬರೆದ ತಾನು ತನ್ನ ಹಳ್ಳಿಗೆ ಹೋಗಿ ಮುಂದೆ ವಸಂತನ ಭೆಟ್ಟಿಗಾಗಿ ಬರುವ ದಿನಾಂಕ ಮತ್ತು ವೇಳೆಯನ್ನು ತಿಳಿಸಿದ.

ಆ ಪತ್ರದ ಸುದ್ದಿ ಕೇಳಿದ ಕೂಡಲೇ ಸುಧಾ ಹೇಳಿದಳು. "ನೀವು ಮನೆಯಲ್ಲಿ ಇರಬಹುದು. ನಾನು ನನ್ನ ಶವರೂರಿಗೆ ಹೊರಟುಹೋಗುತ್ತೇನೆ !"

"ಹುಚ್ಚಿಯು ಹಾಗೆ ಹೀಗೇಕೆ ಮಾಡುವಿ ಸುಧಾ ? ನಿನಗೇನೂ ತಿಳಿಯುವದಿಲ್ಲ. ಪರದೇಶದಿಂದ ಬಂದಿದ್ದಾನೆ. ಅವನನ್ನು ಭೆಟ್ಟಿಯಾಗಬಾರದೇ ?"

"ನಿಮಗೆ.......ಹೆಂಗಸರ ಮನಸ್ಸು.......ತಿಳಿಯುವದಿಲ್ಲ...." ಸುಧಾ ಅಳತ್ತಿದಳು.

"ಅವರ ಸುದ್ದಿ ಕೇಳಿದ ಕೂಡಲೇ, ಹೀಗೇಕೆ ಅಳುವಿ ? ನಿನಗೆ ಆಗಿದೆಯಾದರೂ ಏನು ?" ವಸಂತ ಸ್ವಲ್ಪ ಧೈರ್ಯದಿಂದಲೇ ಕೇಳಿದ.

ಸುಧಾ ಅಳುತ್ತ ಹೇಳಿದಳು "ಅವರಿಗೆ ಮಗುವಿದೆ........ಅವರು ದೊಡ್ಡವರು........ನಮ್ಮ ಕುಮಾರ !!"

"ಏನಾದರೊಂದನ್ನು ನೆನೆದು ಏನು ಮಾಡುವೆ ? ಆಗಿದ್ದೆಲ್ಲ ಆಗಿ ಹೋಗಿದೆ. ದೇವರ ದಯೆಯಿದ್ದರೆ ಎಲ್ಲವೂ ದೊರೆಯುವುದು."

"ಇಲ್ಲ ನಿಮಗೆ ತಿಳಿಯುವದಿಲ್ಲ" ಅಳುತ್ತಲೆ ಸುಧಾ ಹೇಳಿದಳು.

ಎರಡು ಮೂರು ದಿನ ಸಂದವು. ಈಶ್ವರನ್ ಬರುವ ದಿನ ಸಮೀಪಿಸಿತು. ಮರುದಿನವೇ ಈಶ್ವರನ್ ವಸಂತನ ಕಡೆಗೆ ಬರುವವನು. ಎಲ್ಲವನ್ನೂ ಸ್ಪಷ್ಟವಾಗಿ ಮೊದಲೇ ಹೇಳಿಬಿಡಬೇಕೆಂದು ವಸಂತ ಬೆಳಗಿನಲ್ಲಿ ಸುಧಾಳಿಗೆ ಹೇಳಿದ "ನಾಳೆಯೇ ಈಶ್ವರನ್ ಬರಬಹುದು"

"ನಿಶ್ಚಿತವಾಗಿಯೂ ?"

ಹೌದು, ಪತ್ರ ಬಂದಿದೆ. ಬರುವವರಿಗೆ ಬೇಡವೆನ್ನಲು ಹೇಗೆ ಆಗುವುದು?"

"ನಾನು ಇಂದೇ ಹೊರಡುವೆ!" ನಿಶ್ಚಯಾತ್ಮಕ ಧ್ವನಿಯಲ್ಲಿ ಸುಧಾ ಹೇಳಿದಳು.

"ಈಶ್ವರನ್ ಅಕ್ಕ ಇಲ್ಲಿಗೆ ಬಂದಾಗ, ನಾನೊಬ್ಬನೇ ಮನೆಯಲ್ಲಿ ಸೊಸೆಯಂತೆ ಇರಬೇಕೆ?" ಸಿಟ್ಟಿನಿಂದ ವಸಂತ ನುಡಿದನು.

"ನನಗೇನು ಗೊತ್ತಿಲ್ಲ. ಬೇಕಾದರೆ ನೀವೂ ಬನ್ನಿರಿ."

ಸುಧಾಳ ಮಾತನ್ನು ಕೇಳಿ ವಸಂತನಿಗೆ ಮತ್ತಿಷ್ಟು ಸಿಟ್ಟು ಬಂದಿತು. "ಇಲ್ಲಿ ನೀನು ಇರಲೇಬೇಕು. ನನ್ನ ಮಾತನ್ನು ಕೇಳಲೇಬೇಕು."

"ಏಕೆ? ನನ್ನನ್ನು ಕಟ್ಟಿ ಹಾಕುತ್ತೀರಾ?" ಸುಧಾ ಧ್ವನಿಯನ್ನು ಏರಿಸಿ ಮಾತನಾಡಿದಳು.

ವಸಂತನಿಗೆ ತಡೆದುಕೊಳ್ಳುವದಾಗಲಿಲ್ಲ, "ಏನೆನ್ನುತ್ತೀ ಸುಧಾ. ಯಾರ ಮುಂದೆ ಮಾತನಾಡುತ್ತೀ?" ವಸಂತ ಸಿಟ್ಟಿನಿಂದ ಕೆನ್ನೆಯ ಮೇಲೆ ಹೊಡೆದನು.

ಹಾವು ಓಡಿಹೋಗಿ ಸುರುಳಿ ಸುತ್ತಿಕೊಳ್ಳುವಂತೆ, ಸುಧಾ ಹಾಸು ಗೆಯ ಮೇಲೆ ಉರುಳಿದಳು!

ಕಣ್ಣೀರಿನಿಂದ ಹಾಸುಗೆಯನ್ನು ತೋಯಿಸಿದಳು. "ನಾನು ಪಾಪಿ!···· ಇಲ್ಲ, ಅವಳ ಮುಖ ನೋಡಲಾರೆ! ....ಇದೇ ದಿನ ಹೋಗಬೇಕು!........ ಅಯ್ಯೋ ತಲೆಶೂಲೆ!........"

ಅವಳಾಡುವ ಆ ಮಾತುಗಳನ್ನು ಕೇಳಿ, ವಸಂತನ ಹೃದಯ ಕರುಣೆ ಯಿಂದ ಕರಗಿ ನೀರಾಯಿತು. ಹೆಣ್ಣು ಜೀವಕ್ಕೆ ಎಷ್ಟು ತ್ರಾಸಕೊಡುತ್ತಿರುವೆ ನಲ್ಲಾ ಎಂಬುದರ ಅರಿವುಂಟಾಯಿತು. ಅವಳನ್ನು ಸಮಾಧಾನ ಮಾಡು ವುದೇ ತನ್ನ ಆದ್ಯ ಕರ್ತವ್ಯ ಎಂದು ತಿಳಿದುಕೊಂಡನು.

ಸುಧಾ ತಲೆಶೂಲೆ ಎಂದ ಕೂಡಲೆ, ಅವಳ ತಲೆಯನ್ನು ಮೆಲ್ಲಗೆ ಒತ್ತ ಹತ್ತಿದನು. ನೀಲಗಿರಿ ಬಾಟ್ಲಿ ತೆಗೆದುಕೊಂಡು, ಅದರ ಎಣ್ಣೆಯಿಂದ ಅವಳ ನರಗಳನ್ನು ತಿಕ್ಕಹತ್ತಿದನು.

ನೀಲಗಿರಿ ಎಣ್ಣೆಯ ವಾಸನೆ ಬಡಿದ ಕೂಡಲೇ, ಅವಳು ಎಚ್ಚತ್ತು, ವಸಂತನ ಕೈಯಲ್ಲಿರುವ ಬಾಟ್ಲಿಯನ್ನು ಹಿರಿದು ದೂರ ಚೆಲ್ಲಿದಳು. ಕೋಣೆಯ ತುಂಬ ಕಾಜಿನ ಚೂರು!

ವಸಂತ ತನ್ನ ಸಂಸಾರದ ಕಾಜಿನ ಚೂರುಗಳನ್ನು ಕಂಡನು!! ಒಳ ಗೊಳಗೇ ಮನಸ್ಸು ಅತಿ ಖಿನ್ನವಾಯಿತು.

ಸುಧಾ ಬಡಬಡಿಸುತ್ತಿದ್ದಳು. "ಆ ರಾತ್ರಿ ಜೋರಾಗಿ ಕೆಮ್ಮಿತು!"

ಅವಳು ಬಡಬಡಿಸುವ ಮಾತುಗಳನ್ನು ಕೇಳಿ ವಸಂತ ಎಚ್ಚತ್ತು ಸುಧಾಳ ಮೈದಡವಿ ಮಾತನಾಡಿಸಿದ— "ಯಾರ ಸುದ್ದಿ ಹೇಳುವಿ ಸುಧಾ?"

"ನೀಲಗಿರಿ ಎಣ್ಣೆ ಹಚ್ಚಿದೆವು!!"

"ಯಾರಿಗೆ ಸುಧಾ ?"

"ಕೆಮ್ಮು ಬಂದಿರುವ ಕೂಸನ್ನು........ ಅಯ್ಯೋ........ ಕುಮಾರ!!" ಸುಧಾಳ ಕಣ್ಣು, ಕಂಬನಿಯಿಂದ ತುಂಬಿಕೊಂಡವು.

ಕುಮಾರನ ಸಾವು, ಸುಧಾಳ ಹೃದಯವನ್ನು ಕೊರೆಯುತ್ತಿದೆಯೆಂದು ವಸಂತ ತಿಳಿದುಕೊಂಡನು. ತನ್ನ ಗೆಳೆಯನ ಮಗನಾದ ಉಮೇಶನನ್ನು ಕಂಡಾಗ, ಅವಳಿಗೆ ಮತ್ತಿಷ್ಟು ಮನಸ್ತಾಪವಾಗುತ್ತಿದೆಯೆಂದೂ ಅವನಿಗೆ ಅನಿಸಿತು. ಸುಧಾಳ ವಿರುದ್ಧ ಹೋದರೆ, ಅವಳ ಮನಸ್ಸಿಗೆ ಸಮಾಧಾನವಾಗುವುದು ಶಕ್ಯವೇ ಇಲ್ಲ. ಆದ್ದರಿಂದ ಊರನ್ನು ಬಿಡುವುದೇ ಹಿತವೆಂದು ತೋರಿತು.

ಐದಾರು ದಿವಸಗಳ ಬಿಡುವಿನ ಚೀಟಿ ಬರೆದು ಆಫೀಸಿಗೆ ಕಳಿಸಿದ. ಆ ದಿನ ಸಂಜೆಯ ಹೊರಡುವ ಸಿದ್ಧತೆಯನ್ನು ಮಾಡಿದ. ಎಲ್ಲ ಸಾಮಾನುಗಳನ್ನು ಕಟ್ಟುವುದು ಮುಗಿಯಿತು. ಟಾಂಗಾ ಮನೆಯ ಮುಂದೆ ಬಂದು ನಿಂತಿತು.

ಮನೆಯ ಬಾಗಿಲು ಇಕ್ಕುವಾಗ, ವಸಂತನಿಗೆ ಮತ್ತೊಂದು ವಿಷಯ ನೆನಪಾಯಿತು. ತಾವು ಹೊರಟುಹೊದಾಗ, ಈಶ್ವರನ್‌ನಿಗೆ ಹೇಗೆ ಸುದ್ದಿ

ಗೊತ್ತಾಗಬೇಕು ? ಅದಕ್ಕಾಗಿ ಕ್ಷಮಾಪಣೆಯ ಒಂದು ಚೀಟಿಯನ್ನು ಬರೆದು, ಬಾಗಿಲದ ಕೊಂಡಿಯಲ್ಲಿ ಸಿಗಿಸಿದನು.

ಇನ್ನು ಟಾಂಗಾ ಹೊರಡುವುದರಲ್ಲಿತ್ತು. ಆದರೆ ಅಷ್ಟರಲ್ಲಿ ಅವರೆದುರು ಮತ್ತೊಂದು ಟಾಂಗಾ ಬಂದು ನಿಂತಿತು.

" ಹೆಲೋ ವಸಂತ ! ಎಂಬ ಕೂಗು ಕೇಳಿಸಿತು. ವಸಂತ ಮತ್ತು ಸುಧಾ ಇಬ್ಬರೂ ಬೆಚ್ಚಿಬಿದ್ದರು !

ಜೇಲಿನಿಂದ ಓಡಿಹೋಗುವ ಕೈದಿಗಳು ಅಧಿಕಾರಿಗಳ ಕೈಯಲ್ಲಿ ಸಿಕ್ಕಾಗ, ಆಗುವ ಪರಿಸ್ಥಿತಿಯಂತೆ ಅವರಿಬ್ಬರಿಗೂ ವಿಚಿತ್ರ ಅನುಭವವಾಯಿತು. ಮುಖ ಪೆಚ್ಚಿನಿಂದ ಕಪ್ಪಿಟ್ಟಿತು !!

" ವಸಂತ, ನಮ್ಮನ್ನು ಸ್ವಾಗತಿಸಲು ಹೊರಟಿದ್ದಿರೇನು ? ನನ್ನ ಹೃದಯ ನಿಲ್ಲಲಿಲ್ಲ. ಬೇಗ ಬಂದುಬಿಟ್ಟಿದ್ದೇನೆ. ನೋಡು."

ಈಶ್ವರನ್‌ನ ಮಾತಿನಲ್ಲಿ ತುಂಬ ಉತ್ಸಾಹವಿತ್ತು. ಮುಖದಲ್ಲಿ ಎಳ ನಗೆ ಸೂಸುತ್ತಿತ್ತು.

ಟಾಂಗಾದಿಂದ ಸಾಮಾನುಗಳು ಕೆಳಗೆ ಬಂದವು ! ಮನೆಯ ಬಾಗಿ ಲದ ಕೀಲಿ ತೆಗೆಯಿತು !! ಚೀಟಿಯು ಪಟಕ್ಕನೆ ಕೆಳಗೆ ಬಿದ್ದಿತು !!!

ಸಾಮಾನು ! ಕೀಲಿ ! ಚೀಟಿ ! ಎಲ್ಲವೂ ಈಶ್ವರನ್ ಅವರಿಗೆ ಬಹಳ ಸಂಶಯ ಉಂಟುಮಾಡಿದವು !

" ಏನಿದು ವಸಂತ ? ನನ್ನ ಮೇಲೆ ಸಿಟ್ಟೆ ?" ಈಶ್ವರನ್ ನೇರವಾಗಿ ವಸಂತನಿಗೆ ಕೇಳಿದ.

ವಸಂತನೂ ಸ್ಪಷ್ಟವಾಗಿ ಎಲ್ಲವನ್ನು ಹೇಳಿದ. ಆದರೆ ಈಶ್ವರನ್ ಆ ಮಾತುಗಳನ್ನು ಕೇಳಿ, ಸುಧಾಳ ಬಗ್ಗೆ ವೈಮನಸ್ಸುತಾಳಲಿಲ್ಲ.

ಸುಧಾಳ ಬಳಿಗೆ ಹೋಗಿ, ಈಶ್ವರನ್, ಅವಳಿಗೆ ತಂದಿರುವ ಸೀರೆ ಮುಂತಾದ ಸಾಮಾನುಗಳನ್ನು ತೆರೆದು ತೋರಿಸಿದ. ತನ್ನ ಮತ್ತು ವಸಂತನ ಸ್ನೇಹದ ಹಳೆಯ ಕತೆಯನ್ನೆಲ್ಲ ಹೇಳಿದ. ಅಮೇರಿಕೆಯ ಪ್ರವಾಸದ ಸುದ್ದಿ ಗಳನ್ನೆಲ್ಲ ಹೇಳಿದ. ಎಲ್ಲರೂ ದುಂಡಾಗಿ ಕುಳಿತು ಕೇಳಿದರು.

ಆ ಮಾತು ಈ ಮಾತು ಎಲ್ಲಾ ಮುಗಿದ ಮೇಲೆ, ಸುಧಾ ವಿರಾಮ ದಿಂದ ಕುಳಿತಿರುವಾಗ, ಈಶ್ವರನ್ ಹೇಳಿದ- "ನಮ್ಮಿಂದ ಏನಾದರೂ ತಪ್ಪಾಗಿದ್ದರೆ ಕ್ಷಮಿಸಬೇಕು !"

ಸುಧಾಳಿಗೆ ಬಹಳ ಖೇದವೆನಿಸಿತು.

ಈಶ್ವರನ್ ಆಡಿದ ಅಂತಃಕರುಣದ ಮಾತುಗಳನ್ನು ಕೇಳಿ ಸುಧಾ ಳಿಗೆ ಕೆಡುಕೆನಿಸಿತು ! ರಾತ್ರಿ ಮಲಗುವಾಗ ಒಮ್ಮೆಲೆ ಸುಧಾ ಅಕ್ಕಳನ್ನು ಬಿಗಿಯಾಗಿ ಅಪ್ಪಿಕೊಂಡುಬಿಟ್ಟಳು. "ಅಕ್ಕ, ನಿಮಗೆ ತ್ರಾಸು ಕೊಟ್ಟಿದ್ದೇನೆ. ನನ್ನನ್ನು ಕ್ಷಮಿಸಿ" ಎಂದು ಅತ್ತಳು.

"ಏನ್ರಿ ಸುಧಾ. ನಿಮ್ಮನ್ನು ನಾನು ಯಾವಾಗಲೂ ತಪ್ಪು ತಿಳಿದು ಕೊಂಡಿಲ್ಲ"

"ನಾನು ಪಾಪಿ ! ನಮ್ಮ ಕೂಸನ್ನು ನೀವೇ ಕೊಂದಿರೆಂದು ಹೇಳಿದೆ ! ನಿಮ್ಮ ಉಮೇಶನ ಕೆಮ್ಮು — ಆ ದಿನ ರಾತ್ರಿ ನಿಮ್ಮ ಉಮೇಶನ ಕೆಮ್ಮು- ನನ್ನ ಕುಮಾರನಿಗೆ ಹತ್ತಿ, ಅವನನ್ನು ಕೊಂದಿತೆಂದು ತಿಳಿದೆ !....ಅಯ್ಯೋ ಕ್ಷಮಿಸಿ. ನಿಮ್ಮನ್ನು ಉಪವಾಸ ಊರಿಗೆ ಕಳಿಸಿದೆ...ಅಕ್ಕಾ, ನೀವು ನನಗೆ ನಿಜವಾಗಿಯೂ ಅಕ್ಕ !" ಸುಧಾ ಆ ರಾತ್ರಿಯ ಎಲ್ಲ ಸುದ್ದಿಗಳನ್ನು ಮನ ಬಿಚ್ಚಿ ಹೇಳಿದಳು.

ಇಬ್ಬರ ಮನಸ್ಸುಗಳು ಸ್ವಚ್ಛವಾದವು. ಆ ರಾತ್ರಿ ಕತ್ತಲೆ ಇದ್ದರೂ, ಗಾಢವಾದ ಕತ್ತಲೆ ಇದ್ದರೂ, ಅವರಿಗೆ ಎಲ್ಲೆಡೆಗೂ ಬೆಳಕು ಕಂಡಿತು.

# ಆನುಗೋಲು

ರೈಲು ನಿಲ್ದಾಣದಲ್ಲಿ ನಿಂತಿತು !

“ಪೇಪರ ! ಡೇಲಿ ಪೇಪರ !........ಟಾಯಿಮ್ಸ್, ಫ್ರೀ ಪ್ರೆಸ್, ಸಕಾಳ–” ಪ್ಲಾಟ ಫಾರ್ಮ ಮೇಲಿನ ಜನರ ನೂರೆಂಟು ಗದ್ದಲದಲ್ಲಿ ಈ ಧ್ವನಿಯು ಎದ್ದು ಕೇಳಿಸುತ್ತಿತ್ತು. ಹೋಗುವವರ ಬರುವವರ ಗದ್ದಲ! ಚಹಾ ಮುಂತಾದ ಬಿಸಿ ಪಾನೀಯಗಳನ್ನು ಮಾರುವವರ ಕೂಗು ! ಫಲಾಹಾರ ಮಾರುವವರ ಕೂಗು ! ಇವೆಲ್ಲವುಗಳನ್ನು ಮೀರಿ ಪೇಪರ ! ಪೇಪರ ಎಂದು ಒದರುವವನ ವಿಚಿತ್ರ ಧ್ವನಿ ! ಅದೂ ಒಬ್ಬ ಮುದುಕನ ಕೂಗು

ಗಾಡಿಯಿಂದ ಕೆಳಗಿಳಿಯುವಾಗ ರಂಜನಾಳ ಲಕ್ಷ್ಯ ಆ ಧ್ವನಿಯ ಕಡೆಗೇ ಹೋಯಿತು. ನೋಡುತ್ತಾಳೆ, ಅವನೊಬ್ಬ ಮುದುಕ ! ಹಣ್ಣು ಮುದುಕ! ಪ್ರತಿಯೊಂದು ಡಬ್ಬಿಯ ಕಿಟಕಿಗಳ ಹತ್ತಿರ ನಿಂತುಕೊಂಡು ತನ್ನ ಪತ್ರಿಕೆಗಳನ್ನು ಮಾರಲು ಯತ್ನಿಸುತ್ತಿದ್ದನು. ರಂಜನಾ ಮನಸ್ಸಿನಲ್ಲಿಯೇ ಅಯ್ಯೋ ಪಾಪ !” ಎಂದುಕೊಂಡಳು.

ಇಬ್ಬರು ಕೂಲಿಗಳು ಸೆಕೆಂಡ ಕ್ಲಾಸ ಡಬ್ಬಿಯೊಳಗಿಂದ ರಂಜನಾ ಮತ್ತು ನಿರಂಜನರ ಪ್ರವಾಸದ ಸಾಮಾನುಗಳನ್ನು ಕೆಳಗೆ ಇಳಿಸುತ್ತಿದ್ದರು. ರಂಜನಾಳ ಕೈಯಲ್ಲಿ ಏಳು ತಿಂಗಳ ಮಗು ಬೇಬಿ ಇದ್ದಳು. ಅವಳು ಸೆಕೆಂಡ ಕ್ಲಾಸ ಡಬ್ಬಿಯ ಬಾಗಿಲದ ಹತ್ತಿರವೇ ನಿಂತುಕೊಂಡಿದ್ದಳು. ಹೊರಗಣ್ಣುಗಳು ಬೇಬಿಯ ಕಡೆಗೆ ನೋಡುತ್ತ, ಅವಳನ್ನು ಆಟವಾಡಿಸುವಂತೆ ನಟಿಸುತ್ತಿದ್ದರೂ ಅವಳ ದೃಷ್ಟಿ ಪೇಪರ ಮಾರುವ ಆ ಮುದುಕನ ಕಡೆಗೇ ಇತ್ತು.

ಆ ಮುದುಕನ ಕೈಯ್ಯಲ್ಲಿ ಪತ್ರಿಕೆಗಳು ಇದ್ದರೆ ಇನ್ನೊಂದು ಕೈಯ್ಯಲ್ಲಿ ಒಂದು ಆನುಗೋಲು. ಆ ಆನುಗೋಲನ್ನು ಊರುತ್ತಲೇ ಅವನು ತನ್ನ

ಹೆಜ್ಜೆಗಳನ್ನು ಮುಂದೆ ಸಾಗಿಸುತ್ತಿದ್ದನು. ಸಾಲದುದಕ್ಕೆ ಕಣ್ಣುಗಳು ಸೆಟ್ಟಗೆ ಕಾಣದಿದ್ದುದರಿಂದ, ಓಡಾಡುವಾಗ ಅವನ ಹೆಜ್ಜೆ ಕುಂಠಿತವಾಗುತ್ತಿತ್ತು. ತಲೆಯ ಮೇಲೆಲ್ಲ ಬಿಳಿಯ ಕೂದಲು. ಒಬ್ಬ ಯೋಗಿಯ ಹಾಗೆ ಬಿಳಿ ಗಡ್ಡವನ್ನು ಬೆಳೆಯಿಸಿ ಬಿಟ್ಟಿದ್ದ. ಇಂಥ ವಯಸ್ಸಿನ ಆ ಮುದುಕ ಎಷ್ಟು ಕಷ್ಟಪಡುತ್ತಿರುವನಲ್ಲ! ಎಂದು ರಂಜನಾ ಮನದಲ್ಲಿಯೇ ಯೋಚಿಸುತ್ತಿದ್ದಳು.

ನಿರಂಜನ ತನ್ನ ಆಫೀಸರರ ಠೀವಿಯಲ್ಲಿಯೇ ಇದ್ದನು. ರೈಲು ಬಂಡಿಯಿಂದ ದೂರಸರಿದು ನಿಂತು, ಕೂಲಿಗಳು ತರುತ್ತಿರುವ ಸಾಮಾನುಗಳನ್ನು ನಿರೀಕ್ಷಿಸುತ್ತಿದ್ದನು. ಎತ್ತ ಕಡೆಗೋ ಲಕ್ಷವಿಟ್ಟು ರಂಜನಾ ಸುಮ್ಮನೆ ನಿಂತದ್ದನ್ನು ನೋಡಿ "ರಂಜನಾ, ಇತ್ತ ಕಡೆಗೆ ಬಾ, ಅಲ್ಲಿ ಗದ್ದಲದಲ್ಲಿ ಏಕೆ ನಿಂತಿರುವೆ?" ಎಂದು ಕೂಗಿದನು.

"ಒಹೋಹೋ! ಬೇಬಿ! ಪೇಪರ ಬೇಕು!" ನಿರಂಜನನ ಕಡೆಗೆ ಹೊರಟ ರಂಜನಾ ಒಮ್ಮೆಲೆ ಹೊರಳಿ ನೋಡಿದಳು. ಪೇಪರ ಮಾರುವ ಮುದುಕನ ಕೈಯ್ಯಲ್ಲಿಯ ಪತ್ರಿಕೆಯೊಂದನ್ನು ಬೇಬಿ ಆಟವಾಡುತ್ತ ಜಗ್ಗಿಕೊಂಡು ಬಿಟ್ಟಿದ್ದಳು. ಅದಕ್ಕಾಗಿಯೇ ಆ ಮುದುಕ ನಗುತ್ತ, ಬಹಳ ಹುಡುಗತನದ ರೀತಿಯಿಂದ ನಗುತ್ತ ಬೇಬಿಯನ್ನು ಮಾತನಾಡಿಸುತ್ತಿದ್ದ.

"ಬಣ್ಣದ ಬೊಂಬೆ! ಬಣ್ಣದ ಬೊಂಬೆ! ಅದರಲ್ಲಿ ಇದೆ!" ಮುದುಕ ತನ್ನ ಅನುಗೋಲನ್ನು ಊರಿ ಹೊಟ್ಟೆತುಂಬ ನಕ್ಕನು. ಅವನ ಮುಖದ ಮೇಲೆ ಆನಂದವು ಲಾಸ್ಯವಾಡುತ್ತಿದ್ದಿತು. ಅವನ ಬೆಳ್ಳಿಮಿಂಚಿನ ಗಡ್ಡದ ಕೂದಲಗಳೂ ಸಹ ಕುಣಿಯುತ್ತಿದ್ದವು. ನೀರಿಗೆಗಟ್ಟಿದ ಆ ಮುಖದಲ್ಲಿ ಯೌವನದ ಉತ್ಸಾಹ ತುಂಬಿದ್ದಿತು.

ಒಂದು ಪುಟ್ಟಹಕ್ಕಿ ಆನಂದದಿಂದ ಎರಡೂ ರೆಕ್ಕೆಗಳನ್ನು ಪಟಪಟ ಬಡಿಯುವಂತೆ, ತನ್ನ ಎರಡೂ ಮಾಟಕೈಗಳನ್ನು ಬಡಿಬಡಿದು ಬೇಬಿ ನಕ್ಕಳು. ಅಲ್ಲಿಯೇ ಜೊತೆಯಲ್ಲಿ ನಿಂತ ಉದಯಕುಮಾರ ಜಿಗಿದಾಡಿದ. ಈ ಮೋಹಕ ಸನ್ನಿವೇಶ ನೋಡಿ, ಸುತ್ತಲಿದ್ದ ಜನ ಮುಗ್ಧಗೊಂಡಿತು.

ರಂಜನಾ ಬೇಬಿಯ ಕೆಂಗಲ್ಲಗಳಿಗೆ ಮುದ್ದು ಕೊಡುತ್ತ, ಆ ಮುದುಕ ನಿಗೆ ಪತ್ರಿಕೆಯ ಬೆಲೆಯಾದ ಎಂಟಾಣೆ ಕೊಡಹೋದಳು.

ಅವನು ಎಂಟಾಣೆ ಇಸಗೊಳ್ಳಲಿಲ್ಲ. "ಬೇಬಿಗೆ ಕೊಟ್ಟುಬಿಡಿರಿ! ಥೂ ಬೇಬಿ!" ಮುಗುಳು ನಗೆ ನಗುತ್ತ ಆ ಮುದುಕ ಬೇಬಿಯ ಗದ್ದಹಿಡಿದು ಮಾತನಾಡಿಸಿದ.

ರಂಜನಾ ಎಂಟಾಣೆ ತೆಗೆದುಕೊಳ್ಳಲು ಮತ್ತೆ ಕೇಳಿಕೊಂಡಳು. "ಬೇಬಿ ನನ್ನ ಮೊಮ್ಮಗಳೇ! ಅವಳಿಗೆ ಪೇಪರಮಿಂಟ, ಬಿಸ್ಕೀಟ ಕೊಡಿ ಸಿರಿ..........." ಮತ್ತೆ ಆ ಮುದುಕ ಗಹಿಗಹಿಸಿ ನಕ್ಕನು.

"ಪೇಪರ! ಡೇಲಿ ಪೇಪರ.........!" ಎಂದು ಒದರುತ್ತ ಮುಂದೆ ಸಾಗಿದವನು ಬೇಬಿಯ ಕಡೆಗೆ ಹಿಂದೆ ಹೊರಳಿ ನೋಡಿ "ಟಾಟಾ ಟಾಟಾ!" ಎಂದು ಕೈಮಾಡಿದನು.

ರಂಜನಾ ಕೊಡಹೋದ ಎಂಟಾಣೆ ಅವಳ ಕೈಯಲ್ಲಿಯೇ ಉಳಿಯಿತು. ನಿಜವಾಗಿ ಆ ಮುದುಕ ಎಂಟಾಣೆ ಇಸಿದುಕೊಂಡುಬಿಟ್ಟಿದ್ದರೆ ನ್ಯಾಯವಾಗು ತ್ತಿತ್ತು. ಚಿಂತೆಗೆ ಏನೂ ಕಾರಣವಿರುತ್ತಿರಲಿಲ್ಲ. ತಾನು ಹಾಗೆ ಮಾಡಿ ದುದು ತಪ್ಪೋ, ಒಪ್ಪೋ ಎಂಬುದು ರಂಜನಾಳಿಗೆ ತಿಳಿಯಲಿಲ್ಲ. ಆ ಘಟ ನೆಯನ್ನು ಅವಳಿಗೆ ಮರೆಯುವದೂ ಆಗಲಿಲ್ಲ.

ಅದೇ ದಿನ ರಾತ್ರಿ! ಗಡಿಯಾರ ಹತ್ತುಗಂಟೆ ಹೊಡೆದುಕೊಂಡಿತು. ಯುವರಾಜ ಉದಯಕುಮಾರ ಮಲಗಿದ್ದನು. ಆದರೆ ಬೇಬಿ ಮಾತ್ರ ದೀಪದ ಬೆಳಕಿನಲ್ಲಿ ಆಟವಾಡುತ್ತಿತ್ತು. ಕೈಯಲ್ಲಿ ಚಿತ್ರದ ಪತ್ರಿಕೆಯನ್ನು ಹಿಡಿದು ಕೊಂಡು "ಪಾಟ ಪಾಟ!" ಎಂದು ಬೊಟ್ಟುಮಾಡಿ ತೋರಿಸಿತು.

"ನೋಡಿದಿರಾ, ಅಜ್ಜ ಕೊಟ್ಟ ಪುಸ್ತಕದ ಮೇಲೆ ಎಷ್ಟು ಪ್ರೀತಿ ಇದೆ, ಇದಕ್ಕೆ!" ರಂಜನಾ ಬೇಬಿಗೆ ಲಟಲಟ ಮುದ್ದುಕೊಟ್ಟಳು.

ಪತ್ತೇದಾರಿ ಕಾದಂಬರಿಯನ್ನು ಓದುವದರಲ್ಲಿ ತಲ್ಲೀನನಾದ ನಿರಂಜನ ಹೆಂಡತಿಯ ಮಾತುಗಳನ್ನು ಕೇಳಿ ಪುಸ್ತಕವನ್ನು ಆಚೆ ಹಾಸಿಗೆಯ ಮೇಲೆ ಒಗೆದ. "ಏನದು ಬೇಬಿ, ಬೇಬಿ?" ಎಂದು ಕೂಗಿದ.

" ಪಾಪ ಪಾಪ " ಬೊಟ್ಟು ಒತ್ತಿ ಹೇಳಿತು.

ಇಬ್ಬರೂ ಬಿದ್ದು, ಬಿದ್ದು ನಕ್ಕರು.

" ನೋಡಿರಿ, ನಮ್ಮ ಬೇಬಿಗೆ ಚಿತ್ರದ ಮೇಲೆ ಇಷ್ಟು ಪ್ರೀತಿ. ಆದರೆ ಪಾಪ! ಆ ಮುದುಕ ಇದರ ಬೆಲೆಯನ್ನು ಸಹ ತೆಗೆದುಕೊಳ್ಳಲಿಲ್ಲ."

" ಏಕೆ?" ನಿರಂಜನ ಚಕಿತನಾಗಿ ಕೇಳಿದ.

" ಏಕೋ!" ರಂಜನಾ ಕೈತಿರುವುತ್ತ ನುಡಿದಳು.

" ಹಾಗಾದರೆ ಏನು ಹೇಳಿದ?"

" ನನ್ನ ಮೊಮ್ಮಗಳು, ರೊಕ್ಕ ಬೇಡ ಎಂದ."

" ಮೊಮ್ಮಗಳು !! " ನಿರಂಜನ ಒಮ್ಮೆಲೆ ಉದ್ಗಾರ ತೆಗೆದ, ಅವನಿಗೆ ನಗುವು ಬಂದುಬಿಟ್ಟಿತು. " ಆ ಮುದುಕ ಹುಚ್ಚನಿರಬೇಕು!" ರಂಜನಾ ಮೌನವಾಗಿಯೇ ಇದ್ದಳು. ಏನೂ ಉತ್ತರಕೊಡಲಿಲ್ಲ.

" ಹೀಗೆ ಚಿಕ್ಕಮಕ್ಕಳೆಲ್ಲ ಮೊಮ್ಮಕ್ಕಳಾದರೆ, ಅವನ ವ್ಯಾಪಾರ ಹೇಗೆ ಆಗಬೇಕು? ಅವನು ಹೇಗೆ ಬದುಕಬೇಕು? ರಂಜನಾ, ನೀನು ಸುಮ್ಮನೆ ಅವನಿಗೆ.........."

" ಅವನೇ ಅಲ್ಲಿ ಅತಃಕರುಣದಿಂದ ನಗುತ್ತ ಹೋಗಿಬಿಟ್ಟ!"

" ಹುಚ್ಚನಿರಬೇಕು ಹುಚ್ಚ! ಅವನು ವ್ಯಾಪಾರಕ್ಕೆ ನಿಂತಂತೆ ಕಾಣು ವದಿಲ್ಲ."

" ಅಹುದು ನನ್ನದು ತಪ್ಪಾಗಿದೆ. ಆದರೆ ಅವನಿಗೆ ಹುಚ್ಚನೆಂದು ಏಕೆ ಕರೆಯುವಿರಿ? ಮಕ್ಕಳ ಮೇಲೆ ಅಂಥ ಪ್ರೀತಿ ಏಕೆ ಇರಬಾರದು? ನನ್ನ ತಂದೆ, ನಿಮ್ಮ ತಂದೆ ಇದ್ದರೆ, ಅವರು ಹೀಗೆ ಮೊಮ್ಮಕ್ಕಳನ್ನು ಪ್ರೀತಿ ಸುತ್ತಿದ್ದಿಲ್ಲವೇ? ನಿಮಗಂತೂ ಯಾರನ್ನೂ ಹಚ್ಚಿಕೊಳ್ಳುವುದು ಬೇಡ. ಮಿಲಿಟರಿ ಅಂದರೆ ಶುದ್ಧ ಮಿಲಿಟರಿ ಆಗಿರುವಿರಿ. ಹೃದಯವೆಂಬುವದೇ ಇಲ್ಲ. ದಯೆ, ಮಾಯೆ ಇಲ್ಲವೇ ಇಲ್ಲ.

ಮಿಲಿಟರಿ ವೀರನಾದ, ಮೇಜರ ನಿರಂಜನನ ಎದುರಿಗೆ ಇಷ್ಟು ಧೈರ್ಯವಾಗಿ ಮಾತನಾಡಲು ರಂಜನಾ ಇತ್ತಿತ್ತಲಾಗಿ ಹೆದರುತ್ತಿರಲಿಲ್ಲ.

ಹೊರಗಿನ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಬಲ್ಲ ನಿರಂಜನ, ಹೆಂಡತಿಯ ಜೊತೆಯ ಯುದ್ಧದಲ್ಲಿ ಗೆಲ್ಲಲಾರನೆಂದು ಅವಳಿಗೆ ಅನಿಸಿತ್ತೋ ಏನೋ! ನಿರಂಜನ ಹೊರಳಿ ರಂಜನಾಳ ಕಡೆಗೆ ನೋಡಿದ. ಆವಳು ತನ್ನ ವಾದ ದಲ್ಲಿಯೇ ತಲ್ಲೀನಳಾಗಿದ್ದಳು.

ನಿರಂಜನ ಚಟಕ್ಕನೇ ಎದ್ದು, ಟೇಬಲ್ ಮೇಲಿರುವ ಸಿಗರೇಟ ಪ್ಯಾಕ ತೆರೆದ. ಒಂದು ಸಿಗರೇಟನ್ನು ಬಾಯಲ್ಲಿ ಹಿಡಿದು, ಕಡ್ಡೀಪೆಟ್ಟಿಗೆಯ ಕಡ್ಡಿಗ ಳನ್ನು ಬಾರಿಸಿದ.

ರಂಜನಾ ನಿರ್ವಾಹವಿಲ್ಲದೆ ಎದ್ದುಬಂದ, ಕಡ್ಡಿಯನ್ನು ಕೊರೆದು ಸಿಗ ರೇಟ ಹಿಡಿದಳು. "ದಾ ಟ್ಸ್ ರಾಯಿಟ್, ಈಗ ಸರಿಹೋಯಿತು. ರಂಜನಾ, ಸಿಗರೇಟ ಸೇದುವದು ಮಹತ್ವವಲ್ಲ. ನೀನು ಅದನ್ನು ಹೊತ್ತಿಸುವದು ಮಹ ತ್ವದ್ದು. ನಾನು ಸಿಗರೇಟ! ನೀನು ಮದ್ದಿನ ಕಡ್ಡಿ! ಮದ್ದು ಎಂದರೆ ಮ ಮಾ ಮಿ ಮೀ ಮು............ಅಲ್ಲವೇ? ನಿನ್ನಿಂದಲೇ ಈ ಪ್ರೇಮದ ದೀಪ.........!" ಹೀಗೆನ್ನುತ್ತ ನಿರಂಜನ ಅವಳ ಮೇಲೆ ಉಫ್ ಉಫ್, ಎಂದು ಸಿಗರೇಟಿನ ಹೊಗೆ ಬಿಟ್ಟನು.

ರಂಜನಾ ಮುಖ ಹೊರಳಿಸಿ, ತನ್ನ ಪಲ್ಲಂಗದಲ್ಲಿ ಹೋಗಿ ಕುಳಿತಳು. "ಹೀಗೇಕೆ ರಂಜನಾ?" ಸೀರವಾಗಿ ನಿರಂಜನ ಅವಳಿಗೆ ಪ್ರಶ್ನೆ ಕೇಳಿದ. ಅವಳು ಬೇಗ ಉತ್ತರ ಕೊಡದಿರಲು, ತಾನೇ ಮಾತನಾಡಿದ. "ಮತ್ತೆ ಆ ಅಜ್ಜನನ್ನು ನೋಡಿದ ಕೂಡಲೇ ನಿನಗೆ ತಂದೆಯ ನೆನಪು ಆಗಿರಲಿಕ್ಕೇಬೇಕು! ಅಲ್ಲವೇ?

"ಹುಂ" ಎಂದು ಧನಿ ಎಳೆದಳು ರಂಜನಾ.

"ನಿನ್ನ ತಂದೆ ಬದುಕಿದ್ದರೆ"......ಅವನೂ ಹೀಗೆ ಗಡ್ಡ ಬಿಟ್ಟು ಓಡಾಡು ತ್ತಿದ್ದ ಅಲ್ಲವೇ?"

"ಹುಂ" ಎಂದು ರಂಜನಾ ಮತ್ತೆ ಧ್ವನಿ ಎಳೆದಳು.

"ಛೀ ಹುಚ್ಚಿ, ಸತ್ತವರು ಸತ್ತುಹೋದರು. ಅವರನ್ನು ನೆನಿಸಿ, ನೀನು ಏನು ಮಾಡಬೇಕಾಗಿದೆ? ನಿನ್ನ ಹಾಗೆ ನಾನು ಮಾಡಿದರೆ, ನಾನು ನೌಕರಿಗೇ ರಾಜೀನಾಮೆ ಕೊಡಬೇಕು. ಹುಚ್ಚೀ!"

"ಇರಲಿ, ನಿಮಗೊಬ್ಬರಿಗೆ ತಂದೆಯ ನೆನಪು ಇರದಿದ್ದರೆ, ಅವರ ಬಗ್ಗೆ ಏನೂ ಚಿಂತೆ ಇರದಿದ್ದರೆ ಬಿಡಲಿ. ನನಗೇಕೆ ಅಡ್ಡಬರುವಿರಿ? ಹೆಂಗಸರ ಮನಸ್ಸೇ ನಿಮಗೆ ಅರ್ಥವಾಗುವದಿಲ್ಲ!" ರಂಜನಾಳ ನಾಲಿಗೆ ಸ್ವಲ್ಪ ಹರಿತವಾಗಿತ್ತು.

"ಆಯಿತು. ಮತ್ತೆ ಮತ್ತೆ ಅದೇ ಮಾತು. ಹೆಂಗಸರ ಮನಸ್ಸೇ ವಿಚಿತ್ರ" ನಿರಂಜನ ಸಿಗರೇಟಿನ ಒಂದೆರಡು ಝುರಿಕೆ ಎಳೆದನು.

ರಂಜನಾಳಿಗೆ ಸಿಗರೇಟಿನ ಹೊಗೆ ಕಾಣಿಸಿತೇ ಹೊರತು ದೀಪ ಕಾಣಿಸಲಿಲ್ಲ! ಒಂದು ನಿಮಿಷದಲ್ಲಿ ಚಕ್ಕನೆ ನಿರಂಜನ ಸ್ವಿಚ್ಚನ್ನು ಒತ್ತಿ ದೀಪ ಆರಿಸಿದ! ಇವರ ಮಾತುಗಳಲ್ಲಿ ಬೇಬಿ ಯಾವಾಗಲೋ ನಿದ್ದೆ ಹೋಗಿದ್ದಿತು.

( ೨ )

ಬೆಳಗಿನ ಒಂಬತ್ತು ಗಂಟೆ! ಸೂರ್ಯ ಪ್ರಕಾಶ ಸ್ವಚ್ಛವಾಗಿ ಬಿದ್ದಿದೆ. ಹಸರು ಎಲೆಗಳ ಮೇಲೆ ಬಿಸಿಲು ಲಾಸ್ಯವಾಡುತ್ತಿದೆ. ನಿರಂಜನ ನಸುಕಿನಲ್ಲಿಯೇ ಎದ್ದು ತನ್ನ ಕೆಲಸಕ್ಕಾಗಿ ಹೋಗಿದ್ದಾನೆ. ಉದಯಕುಮಾರ ಮತ್ತು ಬೇಬಿ ಹೊರಗೆ ಆಟವಾಡಲು ಹೋಗಿದ್ದಾರೆ. ಮನೆಯಲ್ಲಿ ರಂಜನಾ ಒಬ್ಬಳೇ.

ಅಟ್ಟದ ಮೇಲೆ ಎತ್ತರವಾದ ನಿಲುಗನ್ನಡಿಯ ಎದುರಿಗೆ ನಿಂತಿದ್ದಾಳೆ. ಅವಳ ನೀಳವಾದ ಕರಿಕುರುಳು ಭುಜದ ಮೇಲೆ ಹರಡಿವೆ. ತನ್ನ ಕೂದಲನ್ನು ಬಾಚಿಕೊಳ್ಳಬೇಕೆಂದು ನಿಂತವಳು, ತನ್ನ ಚಲುವನ್ನು ನೆನಿಸಿಕೊಂಡು ತಾನೇ ನಾಚಿಕೊಂಡಳು. ನೀಟವಾಗಿ ಮಾಟವಾಗಿ ತಿದ್ದಿಮಾಡಿದಂತಿರುವ ಆ ಅಂಗಾಂಗಗಳು! ಅರಳಿದ ಗುಲಾಬಿಯಂತಿರುವ ಮುಖ! ಇವೆಲ್ಲಕ್ಕೂ ಹೆಚ್ಚಾಗಿ ಆ ಚಿಗರೆಗಣ್ಣಿನಂತಿರುವ ಆ ಕಣ್ಣುಗಳು! ಅಹುದು,

ಏಳು ವರುಷಗಳ ಹಿಂದೆ ನಿರಂಜನನ ಹೃದಯವನ್ನು ಸೂರೆಮಾಡಿದುದು ಇದೇ ಚೆಲುವು. ರಂಜನಾ ಹೆಮ್ಮೆಪಟ್ಟುಕೊಂಡಳು.

ಹೊರಗೆ ತೋಟದಲ್ಲಿ ಕಿಲಕಿಲ ಧ್ವನಿಯು ಕೇಳಿಸಿತು! ರಂಜನಾ ತನ್ನ ಹಗಲುಗನಸಿನಿಂದ ಎಚ್ಚತ್ತಳು. ಪುನಃ ತನ್ನ ಕೂದಲು ಬಾಚಿಕೊಳ್ಳಹತ್ತಿದಳು. ತೋಟದಲ್ಲಿ ಮತ್ತೆ ಕಿಲ ಕಿಲ ಧ್ವನಿ! ರಂಜನಾಳ ಲಕ್ಷ್ಯ ಅತ್ತಕಡೆಗೆ ಹೋಯಿತು. ಮಕ್ಕಳು ಇಷ್ಟು ಏಕೆ ನಗುತ್ತಿರುವರೆಂದು ನೋಡುವ ಕುತೂಹಲದಿಂದ 'ಬಾಲ್ಕನಿಗೆ' ಬಂದಳು.

ಕೆಳಗೆ ತೋಟದಲ್ಲಿ ಉದಯಕುಮಾರ ಒಂದು ಬಡಿಗೆ ಹಿಡಿದುಕೊಂಡು ಕಳ್ಳ ಹೆಜ್ಜೆಯಿಂದ ಗಿಡದಿಂದ ಗಿಡಕ್ಕೆ ಓಡಾಡುತ್ತಿದ್ದನು. ಅವನು ಏನೋ ಹುಡುಕುತ್ತಿದ್ದನು. ಬೇಬಿ ಕೈಗಾಡಿಯಲ್ಲಿ ಇದ್ದಳು. ಆಳುಮಗ ಟೊಂಕದ ಮೇಲೆ ಕೈಯಿಟ್ಟುಕೊಂಡು ನಿಂತು ಮೋಜು ನೋಡುತ್ತಿದ್ದನು. ಏನು ಮೋಜು ಇರಬೇಕೆಂದು ರಂಜನಾಳಿಗೆ ತಿಳಿಯಲಿಲ್ಲ. ಆಳುಮಗನನ್ನು ಒದರಿ ಕೇಳಬೇಕೆಂದಳು. ಅಷ್ಟರಲ್ಲಿಯೆ ಅಡಗಿಕೊಂಡ ವ್ಯಕ್ತಿ ಗಿಡದ ಮರೆಯಿಂದ ಹೊರಬಿದ್ದಿತು. ಆ ವ್ಯಕ್ತಿ ನಿಲ್ದಾಣದಲ್ಲಿ ಕಂಡ ಆ ಮುದುಕ! ಉದಯ ಕುಮಾರನ ಹ್ಯಾಟನ್ನು ತಲೆಯಮೇಲೆ ಹಾಕಿಕೊಂಡು ಅಡಗಿಕೊಂಡಿದ್ದ ಅವನನ್ನು ನೋಡಿದ ಕೂಡಲೆ ತೋಟದಲ್ಲಿದ್ದವರೆಲ್ಲರೂ ನಕ್ಕರು.

ಆದರೆ ರಂಜನಾಳಿಗೆ ಅತ್ಯಂತ ಅಚ್ಚರಿ! ಅದೇ ಮನುಷ್ಯನು ಇಲ್ಲಿಗೆ ಹೇಗೆ ಬಂದನು? ಅವಳಿಗೆ ಬೇಗ ವಿಚಾರವೇ ಬಗೆಹರಿಯಲಿಲ್ಲ. ಮರುಕ್ಷಣವೇ ಎಚ್ಚತ್ತು ದಡದಡನೆ ಕೆಳಗಿಳಿದು ಹೋದಳು. ಅಷ್ಟರಲ್ಲಿ ಮುದುಕನು ಬಗಲಲ್ಲಿ ಪೇಪರ ಇಟ್ಟುಕೊಂಡು ಹೊರಗೆ ಸಾಗಿದ್ದನು.

ಆಳುಮಗನಿಗೆ ಅವನನ್ನು ಕರೆಯಲು ಸನ್ನೆ ಮಾಡಿದಳು. ತೋಟದ ಮಧ್ಯದಲ್ಲಿ ನಿಂತು, ಆ ಮುದುಕ ತನ್ನ ಬಡಿಗೆಯನ್ನು ಎತ್ತಿ " ನಮಸ್ತೆ " ಎಂದು ಹರ್ಷದಿಂದ ನುಡಿದ. ಆ ಮುದಿ ವಯಸ್ಸಿನಲ್ಲಿ ಆ ಧ್ವನಿಗೆ ಎಳೆತನವಿತ್ತು.

"ಬನ್ನಿರಿ ಒಳಗೆ" ರಂಜನಾ ಸೌಮ್ಯವಾಗಿ ನುಡಿದಳು.

"ಏನು ಕೆಲಸ? ಏಕೆ?" ಎಂದು ಆ ಮುದುಕ ಕೇಳಿದ.

ಏನು ಕೆಲಸವೆಂದರೆ ಉತ್ತರವೇನು ಕೊಡಬೇಕು? ರಂಜನಾ ಹಳೆಯ ಸಂದರ್ಭವನ್ನು ಹೊಂದಿಸಿಕೊಂಡು ಹೇಳಿದಳು. "ನಿಮಗೆ ಆ ಎಂಟಾಣೆ..."

"ಓಹೋಹೋ! ಆದೇ ಹದಿನೈದು ದಿನವಾಗಿ ಹೋಯಿತು. ಅದು ಬೇಬಿಗೆ ಮುಟ್ಟಿದ್ದರ ಪಾವತಿ ಸಿಕ್ಕಿತು. ಬೇಬಿ ಆ ಪಾವತಿ ತೋರಿಸು ಇನ್ನೊಮ್ಮೆ ಸಹಿ ಮಾಡುತ್ತೇನೆ." ಹೀಗೆಂದವನೇ ಆ ಬೇಬಿಯ ಗಲ್ಲಗಳಿಗೆ ಮುದ್ದುಕೊಟ್ಟನು.

ಆ ಮುದುಕನ ಮಾತುಗಳಲ್ಲಿ ಮನೆಯವರಂತೆ ಸಲಿಗೆ ಇದ್ದಿತು. ಹೃದಯ ಕರಗಿತು. ಆದರೂ ತನ್ನ ಕರ್ತವ್ಯವನ್ನು ಪಾಲಿಸಬೇಕೆಂದು ಹೇಳಿದಳು. "ಇದೇನೋ ನಿಮ್ಮ ಸೌಜನ್ಯ. ಪಾಪ! ನೀವು ಬಡವರು ನಿಮ್ಮ ಹಣ ನಾವು ಕೊಡಲೇಬೇಕು.

ಈ ಮಾತು ಕೇಳಿ ಮುದುಕ ಗಂಭೀರನಾದನು, " ಅಮ್ಮಾ ನಾನು ಏಕೆ ಬಡವ ? ನನ್ನ ಕಾಲಮೇಲೆ ನಿಲ್ಲಲು ಕಲಿತಿದ್ದೇನೆ. ಮೇಲಾಗಿ ಹಣ ನಮಗೆ ಏನು ಕೊಟ್ಟೀತು ? ಪ್ರೀತಿಯ ಸಂಗ್ರಹದಿಂದ ಶ್ರೀಮಂತನಾದಷ್ಟು ಹಣದಿಂದ ಏನು ಆಗಬಹುದು ? ಈಗಿನ ಜಗತ್ತು ಹಣದ ಮೇಲೆಯೇ ನಿಂತಿದೆ.

ಆ ಮುದುಕ ಇನ್ನೂ ಏನೇನೋ ಮಾತಾಡುತ್ತಿದ್ದನೋ ಅಷ್ಟರಲ್ಲಿ "ಅಜ್ಜಾ ನಾಳೆಯೂ ಬರತೀಯಾ ?" ಎಂದು ಕೇಳಿದನು.

ಮುದುಕನ ಮುಖದಲ್ಲಿ ತೀವ್ರವೇ ಬದಲಾವಣೆ ಕೂಡಿತು. ಮುಗುಳು ನಗೆಯಿಂದ ಹೇಳಿದ " ಒಹೋಹೋ ಮಗು!"

" ಅಪ್ಪ ಅಜ್ಜನಿಗೆ ಹಾಲು, ಬ್ರೆಡ್, ಬಿಸ್ಕೀಟ ಕೊಡತೀಯಾ ?" ಮುದುಕನ ವಾತ್ಸಲ್ಯಪೂರಿತ ನಗೆ! ಉದಯಕುಮಾರನ ಪ್ರೀತಿಯ ಮಾತು! ಇವುಗಳ ಮಧ್ಯದಲ್ಲಿ ರಂಜನಾ.

ರಂಜನಾ ತನ್ನ ತಂದೆಯಂತೆಯೇ ಅವನನ್ನು ಬರಮಾಡಿಕೊಂಡಳು ಸಲಿಗೆಯಿಂದ ಏಕವಚನದಲ್ಲಿಯೇ ಮಾತನಾಡತೊಡಗಿದಳು. ಪ್ರತಿದಿನ ಬೆಳಗಿನಲ್ಲಿ ಸುಮಾರು ೯ ಗಂಟೆಗೆ ಪೇಪರು ಕೊಡಲು ಬರುತ್ತಿದ್ದನು. ಒಂದು ನಿಮಿಷವಾದರೂ ನಿಂತು ಮಕ್ಕಳನ್ನು ಮಾತನಾಡಿಸದೇ ಹೋಗುತ್ತಿರಲಿಲ್ಲ. ಬಾಗಿಲಲ್ಲಿ ನಿಂತ ರಂಜನಾಳನ್ನು "ಅಮ್ಮಾ, ಹೇಗೆ ಇರುವಿ ?" ಎಂದು ಕೇಳದೆ ಇರುತ್ತಿರಲಿಲ್ಲ. ಅದೇನೋ ಒಂದು ರೀತಿಯ ಸಲಿಗೆ ಬೆಳೆಯಹತ್ತಿತು.

ಒಂದು ದಿನ ರಂಜನಾ ಬಾಗಿಲಲ್ಲಿ ಕಾಣಿಸಲಿಲ್ಲ. ಉದಯಕುಮಾರನನ್ನು ಪ್ರಶ್ನಿಸಿದಾಗ "ಅಲ್ಲೇ-ಒಳಗೆ ಎಂದು ಬೊಟ್ಟುಮಾಡಿ ತೋರಿಸಿದ ಮುದುಕನ ಪೇಪರ ಹಂಚುವ ಕೆಲಸ ಮುಗಿದಿತ್ತು. ಆದುದರಿಂದ ಸ್ವಲ್ಪ ಒಳಗೆ ಕುಳಿತುಕೊಂಡು ಹೋಗಬೇಕೆಂದು ಕೋಲು ಸಪ್ಪಳಮಾಡುತ್ತ ಬಂದನು.

ಪಡಸಾಲೆಯಲ್ಲಿ ರಂಜನಾ ಕಾಣಿಸಲಿಲ್ಲ. ಮುದುಕ ಮುಖವೆತ್ತಿ ಅತ್ತ ಇತ್ತ ನೋಡುವಷ್ಟರಲ್ಲಿ ಪಡಸಾಲೆಗೆ ಹೊಂದಿ ಇರುವ ಕೋಣೆಯಲ್ಲೆ ರಂಜನಾ ಕಂಡಳು. ಕೋಣೆಯ ಸಮೀಪ ಹೋದ. ರಂಜನಾ ವಿರಾಮ ಕುರ್ಚಿಯಲ್ಲಿ ಒರಗಿದ್ದಳು. ಏನೋ ಚಿಂತೆಯಲ್ಲಿದ್ದಳು. ಮುದುಕ ಬಂದುದೂ ಅವಳಿಗೆ ಗೊತ್ತಾಗಲಿಲ್ಲ. "ಅಮ್ಮ ಹೇಗೆ ಇರುವಿ?" ಎಂದು ಕೇಳಿದಾಗಲೇ ಎಚ್ಚರ.

"ಎಲ್ಲಾ ನೆಟ್ಟಗೆ" ಎಂದು ರಂಜನಾ ಸೀರೆಯ ಸೆರಗಿನಿಂದ ಕಣ್ಣೊರಿಸಿಕೊಂಡಳು.

"ಅಮ್ಮಾ, ಏನೋ ನೆಟ್ಟಗಿಲ್ಲವೆಂದು ಕಾಣುತ್ತದೆ. ಏನಾಗಿದೆ ಹೇಳು."

"ಅಜ್ಜ ಇಲ್ಲ, ಎಲ್ಲವೂ ಚೆನ್ನಾಗಿದೆ."

"ಹಾಗಾದರೆ ಬೆಳಗಿನಲ್ಲಿ ಹೀಗೇಕೆ ಕೂಡುತ್ತಿದ್ದಿ ? ಏನೋ ಆಗಿದೆ ಹೇಳಮ್ಮಾ, ನಾನು ನಿನ್ನ ತಂದೆ ಎಂದು ತಿಳಿದುಕೋ ಹೇಳು."

ಅಜ್ಜನ ಮಾತು ಕೇಳಿ ರಂಜನಾಳಿಗೆ ಮರುಭೂಮಿಯಲ್ಲಿ ನೀರು ದೊರೆತಂತೆ ಆದವು. ಆವಳ ಮನಸ್ಸನ್ನು ತಿಳಿದುಕೊಂಡು ಮಾತನಾಡು ವವರು ಆವಳಿಗೆ ಬೇಕಿತ್ತು. ನಿರಂಜನನ ಸ್ವಭಾವವಾದರೋ ಒರಟು ರಂಜನಾಳ ಜೊತೆಗೆ ಪ್ರೀತಿಯಿಂದ ಮಾತನಾಡಿದರೆ ಆಡುತ್ತಿದ್ದ. ಇಲ್ಲ ವಾದರೆ ಭಯಂಕರವಾಗಿ ಜಗಳಾಡುತಿದ್ದ.

ಮುನ್ನಾದಿನ ನಿರಂಜನನಿಗೂ ರಂಜನಾಳಿಗೂ ಒಂದು ವಿಷಯದ ಬಗ್ಗೆ ವಿರಸವುಂಟಾಗಿತ್ತು, ಅದು ಈ ಮುದುಕನ ಬಗ್ಗೆ. ನಿರಂಜನ ಮುಂಜಾವಿ ನಲ್ಲಿ ಮನೆಯಲ್ಲಿ ಇರುತ್ತಿರಲೇ ಇಲ್ಲ. ಪತ್ರಿಕೆ ಮಾರುತ್ತ ಬಂದ ಈ ಮುದು ಕನ ಬಗ್ಗೆ ಅವನಿಗೆ ಏನೂ ಗೊತ್ತಿರುತ್ತಲೇ ಇರಲಿಲ್ಲ. ರಂಜನಾ ಬಹಳ ಕುತೂಹಲದಿಂದ ಈ ಮುದುಕ ತನ್ನ ಮಕ್ಕಳೊಂದಿಗೆ ಆಟವಾಡುವದನ್ನು ಬಣ್ಣಿಸಿ ಹೇಳುತ್ತಿದ್ದಳು. ಬಿಸ್ಕೀಟ, ಹಾಲು ಉದಯ ಕುಮಾರನೇ ತೋಟ ದಲ್ಲಿ ತಂದುಕೊಟ್ಟುದನ್ನು ಬಣ್ಣಿಸುತ್ತಿದ್ದಳು. ಅವಳು ಮಾತುಗಳ ಭರದಲ್ಲಿ ಇರುವಾಗ ನಿರಂಜನ ಸರಕ್ಕನೆ ಉತ್ತರ ಕೊಟ್ಟಿದ್ದ— "ಅವನನ್ನು ಇನ್ನು ಮನೆಯಲ್ಲಿಯೇ ಇಟ್ಟುಕೊಂಡು ಬಿಡು, ಹೇಗೂ ನೀನು ತಂದೆಯನ್ನು ಬಹಳ ನೆನಿಸುತ್ತೀ" ಈ ಮಾತಿನಲ್ಲಿ ತುಚ್ಛತೆ ಇತ್ತು ಎಂದು ರಂಜನಾಳಿಗೆ ಅನಿಸಿತು. ಇಬ್ಬರ ಮಾತುಗಳ ಕಿಡಿ ಹಾರುತ್ತಿರುವಾಗ ಸಿಟ್ಟಿನಿಂದ ದೀಪವನ್ನು ನಿರಂಜನ ಆರಿಸಿಬಿಟ್ಟಿದ್ದ.

ಹೀಗೆ ಮೇಲಿಂದ ಮೇಲೆ ಆಗುತ್ತಿರುವದು ರಂಜನಾಳಿಗೆ ಸರಿಬರಲಿಲ್ಲ. ಆವಳು ನಡೆದು ಹೋದ ಸಂಗತಿ ಸ್ಪಷ್ಟವಾಗಿ ಹೇಳದಿದ್ದರೂ ತನ್ನ ದುಃಖ ವನ್ನೆಲ್ಲ ಆ ಮುದುಕನ ಮುಂದೆ ತೋಡಿಕೊಂಡಳು. "ನನ್ನ ತಂದೆ ನನ್ನನ್ನು ಎಷ್ಟು ಪ್ರೀತಿಸುತ್ತಿದ್ದರೆಂಬುದು" ಇವರಿಗೆ ಗೊತ್ತಿಲ್ಲ. ನಾನು ಹುಟ್ಟಿದ ಕೂಡಲೆ, ನನ್ನ ತಾಯಿ ಸತ್ತುಹೋದಳು. ನನಗೆ ಮೂವರು ಅಕ್ಕಂದಿರು. ಅವರು ಯಾರೂ ಲಗ್ನವಾಗಿ ಸುಖ ಕಾಣಲಿಲ್ಲ. ಎಲ್ಲರೂ ಪ್ರೇಮವಿವಾಹವನ್ನು ಮಾಡಿಕೊಂಡರು. ಅಕ್ಕಂದಿರು ಲಗ್ನವಾದ ಎರಡು–ಮೂರು ವರ್ಷಗಳಲ್ಲಿಯೇ ಮಕ್ಕಳನ್ನು ಕಾಣದೆ ತೀರಿಕೊಂಡರು. ನನ್ನ ಇನ್ನೊಬ್ಬ ಅಕ್ಕ ಉತ್ತರ ಹಿಂದು ಸ್ತಾನದಲ್ಲಿ ಎಲ್ಲಿಯೋ ಇದ್ದಾಳೆ. ಆವಳ ಗಂಡ ನನ್ನ ತಂದೆಯ ಸಂಗಡ

ಜಗಳಾಡಿದ್ದರಿಂದ, ನಮಗೂ ಅವರಿಗೂ ಏನೂ ಸಂಬಂಧವಿರದಂತೆ ಆಗಿ ಹೋಗಿದೆ. ನನ್ನ ತಂದೆ ನನ್ನ ಸಲುವಾಗಿ ಬಹಳ ಕಾಳಜಿ ಮಾಡುತ್ತಿದ್ದ. ನನ್ನನ್ನು ಬಿಟ್ಟು ಒಂದುಕ್ಷಣವೂ ಇರುತ್ತಿರಲಿಲ್ಲ. ತನ್ನ ಸಂಸಾರದ ಗೋಳಿ ನಿಂದ ಬಹಳವಾಗಿ ನೊಂದುಕೊಂಡು ಸೊರಗಿದ. ನಿನ್ನ ಹಾಗೆ ಒಂದು ಬೆತ್ತದ ಕೋಲು ಕೈಯಲ್ಲಿ ಹಿಡಿದುಕೊಂಡು ೪೫ ವರ್ಷದವನಿರುವಾಗಲೇ ಓಡಾಡತೊಡಗಿದ. ನನ್ನ ಮುಂದೆ ಮೇಲಿಂದ ಮೇಲೆ ಹೇಳುತ್ತಿದ್ದ— "ನೋಡು, ರಂಜನಾ ನಿನ್ನ ಲಗ್ನವಾಯಿತೆಂದರೆ ನಿನ್ನ ಮನೆಯಲ್ಲಿಯೇ ನಾನು ಇದ್ದುಬಿಡುತ್ತೇನೆ. ನಿನಗೆ ಅಂಥ ವರನು ಸಿಗಬೇಕು. ನಾನು ಸಾಯುವ ವರೆಗೂ ನೀನೆ ಆನುಗೋಲು "ಎಂದು, ಅದೆಂಥ ನನ್ನ ದುರ್ದೈವವೋ ನಾನು ಹೇಳಲಾರೆ. ನನ್ನ ಲಗ್ನ ನಿಶ್ಚಯವಾಗಬೇಕಾದ ದಿನವೇ ಅವನು ಕಣ್ಣು ಮುಚ್ಚಿದ. ಮನೆ ಶೂನ್ಯವಾಯಿತು, ಮನೆ ಶೂನ್ಯವಾಯಿತು............! ನನ್ನನ್ನು ಎತ್ತಿಹಿಡಿದವರು ಇವರೇ ಇಲ್ಲವಾದರೆ ನಾನೆಲ್ಲಿಯೋ ಅನಾಥೆಯಾಗಿ ಬಿಡುತ್ತಿದ್ದೆ. ನನ್ನ ತಂದೆ ನನಗೆ ಆನುಗೋಲು ಎನ್ನುತ್ತಿದ್ದನೆಂದು ಇವರ ಕಡೆಗೆ ಲಗ್ನವಾಗುವದಕ್ಕಿಂತ ಮುಂಚೆ ನನ್ನ ತಂದೆಯ ಬೆತ್ತದ ಬಡಿಗೆ ಯನ್ನು ಕೊಟ್ಟೆ. ನನ್ನ ತಂದೆಯ ನೆನಪಿಗಾಗಿ ನಾನು ಕೊಟ್ಟೆ. ಇನ್ನು ಮುಂದೆ ನೀವೇ ನನಗೆ ಆನುಗೋಲು ಎಂದು ಹೇಳಿದೆ. ಅಹುದು ಅವರು ಹಾಗೆಯೇ ಇದ್ದರು. ಇನ್ನೂ ಇದ್ದಾರೆ. ಆದರೆ ಇದೊಂದು ವಿಷಯದಲ್ಲಿ ನನ್ನನ್ನು ತುಚ್ಛಮಾಡುತ್ತಾರೆ. ನಾನು ಯಾವುದಕ್ಕೆ ಮಹತ್ವ ಕೊಡು ತ್ತೇನೊ ಅದನ್ನು ಕ್ಷುಲ್ಲಕವೆಂದು ತಿಳಿದುಕೊಳ್ಳುತ್ತಾರೆ. ಏನು ಮಾಡ ಬೇಕು? ಆ ನನ್ನ ತಂದೆಯ ನೆನಪಿಗಾಗಿ ಎಂದು ಕೊಟ್ಟ ಬೆತ್ತದ ಬಡಿ ಗೆಯ ಸುಳಿವನ್ನು ಸಹ ಹಚ್ಚಿಗೊಟ್ಟಿಲ್ಲ. ನನ್ನ ತಂದೆಯ ಮಾತನ್ನೂ ಇವರ ಮುಂದೆ ಆಡಬಾರದು........."

ರಂಜನಾಳ ಕಣ್ಣುಗಳು ತೋಯ್ದುವು. "ಅಜ್ಜಾ, ನೀನು ಕೇಳದೆಯೇ ಎಲ್ಲವನ್ನು ಹೇಳಿದೆ. ನನಗೆ ಈ ವರೆಗೂ ಯಾರೂ ಹೀಗೆ ಕ್ಷೇಮ ಸಮಾ ಚಾರ ಕೇಳಿಲ್ಲ. ಇವರ ಸಲುವಾಗಿ ನಾನು ಬೇಕಾದಷ್ಟು ಕಷ್ಟಪಟ್ಟಿದ್ದೇನೆ. ಇವರು ನನ್ನ ಲಗ್ನವಾದ ವರ್ಷವೇ ಯುದ್ಧಕ್ಕೆಂದು ಹೋಗಿಬಿಟ್ಟರು.

" ಏನೆಂದಿ? " ಮುದುಕ ಆಶ್ಚರ್ಯದಿಂದ ಕೇಳಿದ.

" ಅಹುದು ನಾವು ಪ್ರೀತಿಯಿಂದ ಕಾಲಕಳೆಯುವ ವರ್ಷವೇ ನನ್ನಿಂದ ಹೊರಬಿದ್ದರು. ನನ್ನನ್ನು ಮುಂಬೈಯಲ್ಲಿಯ ಒಂದು ಹಾಸ್ಟಿಲದಲ್ಲಿ ಇಟ್ಟು ಹೋಗಿಬಿಟ್ಟರು. ನನ್ನಂತೆಯೇ ಇವರಿಗೂ ತಂದೆ ಇಲ್ಲ. ತಾಯಿ ಇಲ್ಲ. ಮನೆಯಲ್ಲಿ ಏನಾದರೂ ಬೇನೆ ಬಂದರೆ ಕೇಳುವವರಿಲ್ಲ. ಹೇಗೋ ಕೋಣೆ ಯಲ್ಲಿದ್ದು, ಕಾಲಹರಣ ಮಾಡಿದೆ. ಇವರು ಕಿಂಗ್ಸ ಕಮೀಶನ್ ಸೇರಿಕೊಂಡು ಆಫ್ರಿಕೆಯ ಉತ್ತರ ಭಾಗಕ್ಕೆ ಹೋಗಿದ್ದರಂತೆ. ಅಲ್ಲಿ ಯುದ್ಧದ ಮುಂಭಾಗ ದಲ್ಲಿಯೇ ಹೋಗಿದ್ದರಂತೆ. ಒಂದು "ಟ್ಯಾಂಕಿ"ನಲ್ಲಿ ಕುಳಿತು ಯುದ್ಧ ಭೂಮಿಯ ಮೇಲೆ ಓಡಾಡುವಾಗ, ಬಾಂಬಿನ ಹಲವು ಕಿಡಿಗಳು ಹಾರಿಬಂದು ಇವರ ಮುಖವನ್ನು ಸುಟ್ಟುಬಿಟ್ಟವಂತೆ. ಆ ಸುದ್ದಿ ಗೊತ್ತಾದಾಗ, ನನಗೆ ಹೇಗೆ ಆಗಿರಬೇಕು ನೀನೆ ನೋಡು. ವಿಲಿ ವಿಲಿ ಒದ್ದಾಡಿದೆ. ಸರಕಾರದವರು ಇವರನ್ನು ತಿರುಗಿಕಳಿಸಿಕೊಟ್ಟರು. ಮೈಮೇಲೆ ಅಲ್ಲಲ್ಲಿ ಗಾಯಗಳಾಗಿದ್ದವು. ಒಂದು ಕಪಾಳ ಸುಟ್ಟು ಹೋಗಿತ್ತು. ಆಗ ವಿದ್ರೂಪವಾದ ಮುಖ ಇನ್ನೂ ಹಾಗೆಯೇ ಇದೆ. ಸತಿ ಪತಿಯನ್ನು ಹಿಂಬಾಲಿಸಬೇಕು. ನಾನು ಏನೇ ಆದರೂ ಅವರ ಮೇಲಿನ ಮೋಹವನ್ನು ಕಡಿಮೆಮಾಡಲಿಲ್ಲ. ಹೀಗಿದ್ದೂ ಒಂದು ವಿಷಯದ ಬಗ್ಗೆ ನನ್ನನ್ನು ತುಚ್ಛಮಾಡುವದು ಬಿಡುವದಿಲ್ಲ. "

"ನಿನ್ನ ಇವರು ಯುದ್ಧಕ್ಕೆ ಹೋಗಿದ್ದರೆ? ಎಷ್ಟು ವರುಷ ಹೋಗಿ ದ್ದರು?" ಮುದುಕ ಬಹಳ ಕುತೂಹಲದಿಂದ ಕೇಳಿದ.

ರಂಜನಾಳ ಕೊನೆಯ ವಾಕ್ಯಕ್ಕೂ ಈ ಪ್ರಶ್ನೆಗೂ ಸಂಬಂಧವಿರಲಿಲ್ಲ. ಆದರೂ ರಂಜನಾ ಹೇಳಿದಳು. "ಅಹುದು ಒಂದುವರೆ ವರ್ಷ ಹೋಗಿದ್ದರು."

"ಇವರ ತಂದೆತಾಯಿ ಯಾರೂ ಇಲ್ಲವೆ?"

"ಇಲ್ಲ....!"

ಮುದುಕ ನಿಟ್ಟಿಸುರು ಬಿಟ್ಟು ಎದ್ದು ನಿಂತ! ಹೊರಡಲು ಅನುವಾದ " ಕೂತುಕೊ, ಏಕೆ ಬೇಗ ಎದ್ದಿ ? ನನ್ನ ನಾಲಿಗೆ ಸುಮ್ಮನೆ ಕೂಡ ಲಿಲ್ಲ. ನಿಮಗೆ ತ್ರಾಸವಾಯಿತೋ ಏನೋ ?"

" ಅಮ್ಮಾ ಏನೂ ಇಲ್ಲ. ಇವತ್ತು ಬೆಳಗಿನಿಂದ ತಲೆಶೂಲೆ ಇತ್ತು ಈಗ ಮತ್ತೆ ಹೆಚ್ಚಾಗುತ್ತಿದೆ. ಅದಕ್ಕೆ ಬೇಗ ಎದ್ದೆ ಅಷ್ಟೆ."

" ಏನಾದರೂ ಮಾಡಿಸಿಕೊಡಲಿ ?"

" ಏನೂ ಬೇಡ ಬರತೇನೆ. "

" ಟಾಂಗಾ ಟ್ಯಾಕ್ಸಿ ಮಾಡಿಸಿಕೊಡಲೇ ?" ರಂಜನಾ ಪ್ರಶ್ನೆ ಕೇಳು ಕೇಳುತ್ತಲೆ ಆ ಮುದುಕ ತನ್ನ ಬಡಿಗೆಯನ್ನು ಹಿಡಿದುಕೊಂಡು ಹೊರಟು ಬಿಟ್ಟಿದ್ದ.

ರಂಜನಾ ಮುದುಕನ ಮುಂದೆ ಎಲ್ಲ ಮಾತುಗಳನ್ನು ಹೇಳುವಂತೆ ಹೇಳಿದಳು. ಮಳೆ ಬೀಳುವಾಗ ಮೋಡ ತಡೆಯಬಲ್ಲದೇ ? ಅವಳ ಸ್ಥಿತಿಯೂ ಆ ಮೋಡದಂತೆ ಆಗಿತ್ತು. ತರುವಾಯ ತಾನು ಆ ಅಜ್ಜನಿಗೆ ತ್ರಾಸು ಕೊಟ್ಟೆನಲ್ಲಾ ಎಂದೆನಿಸತೊಡಗಿತು. ಮರುದಿನ ಬಂದಾಗ ತನ್ನ ಕ್ಷಮಾಪಣೆ ಕೇಳಬೇಕೆಂದು ಮಾಡಿದಳು. ಮರುದಿನ ಅವನು ಬರಲಿಲ್ಲ. ನಿರಂಜನ ಕೇಳಿದ " ಪೇಪರಿನ ಬಿಲ್ಲು ಕೊಡಬೇಕಾಗಿದೆ. ಒಂದು ತಿಂಗಳಾಯಿತು. ಆ ಅಜ್ಜ ಬಂದನೆಂದರೆ ಈ ರೂಪಾಯಿ ಕೊಟ್ಟುಬಿಡು. ಬರುತ್ತಾನಲ್ಲವೇ" ಎಂದ.

ಐದಾರು ದಿನವಾದರೂ ಅಜ್ಜನ ಸುಳಿವು ಇರಲಿಲ್ಲ. ಉದಯ ಕುಮಾರ ಬೆಳಗಿನ ಜಾವದಲ್ಲಿ ಆಟವಾಡುವಾಗ, ಮತ್ತೊಬ್ಬ ಪೇಪರಿನವ ಬಂದನು. ಅವನಿಗೆ ಉದಯಕುಮಾರ ಕೇಳಿದ " ಅಜ್ಜ ಎಂದು ಬರುತ್ತಾನೆ ?" ಇವನ ಮಾತು ಕೇಳಿ ಆ ಹುಡುಗ ನಗುತ್ತ ಹೋದನು.

ಆಳುಮಗ ಭವಾನಿ ಹೇಳಿದ " ನೋಡಿರಿ ಅವ್ವಾ ಅಜ್ಜನನ್ನು ಹೇಗೆ ನೆನೆಸುತ್ತಾನೆ, ರಾಜಕುಮಾರ ! ಅಜ್ಜನಿಗೆ ಏನು ಮಂತ್ರಶಕ್ತಿ ಅದೆನೋ ಏನೋ ! ಎಲ್ಲಾ ಹುಡುಗರು ಅವನನ್ನು ಕಂಡಕೂಡಲೇ ಆನಂದದಿಂದ ಕುಣಿಯುತ್ತಾರೆ !"

" ಎಲ್ಲ ಹುಡುಗರನ್ನು ಹೀಗೇ ಆಟವಾಡಿಸುತ್ತಾನೆಯೇ ?" ರಂಜನಾ ಆಶ್ಚರ್ಯದಿಂದ ಕೇಳಿದಳು.

" ಅಹುದು ! ಅವನೊಬ್ಬ ಹುಚ್ಚ ನೋಡಿರಿ "

" ಅಂದರೆ ನಿನಗೆ ಇವನ ಬಗ್ಗೆ ಗೊತ್ತಿರುವದೇನು ?"

ಒಹೋ ? ಊರೊಳಗ ನಮ್ಮ ಅಣ್ಣನ ಮನೆ ಹತ್ತಿರಾನೇ ಈ ಅಜ್ಜ ಇರತಾನೆ. ಇರತಾನೆ ಅಂದರೇನು ಮತ್ತೊಬ್ಬರ ಮನೆಯಲ್ಲಿ ಇರುತ್ತಾನೆ ! "ಇವನಿಗೆ ಮನೆಯೆ ಇಲ್ಲವೇನು ? ಇವನ ಮಕ್ಕಳು.......?"

"ಯಾರೂ ಇಲ್ಲ ಬಾಯರಿ. ಯಾವದೇಶದಿಂದಲೋ ಓಡಿ ಬಂದಿದ್ದ. ಅದೇನೋ ಆಗ ಉತ್ತರದಲ್ಲಿ ದೊಡ್ಡದಂಗೆ ಆಯಿತಂತೆ ಆಗ ಇಲ್ಲಿಗೆ ಬಂದು ಹುಚ್ಚನಂತೆ ಬೀದಿ, ಬೀದಿ ಓಡಾಡುತ್ತಿದ್ದ.

ಈ ಊರೊಳಗೆ ದೊಡ್ಡ ವ್ಯಾಪಾರಸ್ಥರು ಇದ್ದಾರ ನೋಡ್ರಿ; ಅವರೇ ಈ ಅಜ್ಜನಿಗೆ ಉದ್ಯೋಗ ಹಚ್ಚಿಸಿದರು. ಭವಾನಿ ಸ್ವಲ್ಪ ಸುಮ್ಮನಿದ್ದ. ಆ ಮೇಲೆ ಹೇಳಿದ " ಬಾಯರ, ಈ ಅಜ್ಜ ಮೊದಲಿಗೆ ದೊಡ್ಡ ಘರಾಣೇದವ ರಂತರಿ. ಊರೊಳಗ ಕೆಲ ಜನರು ಹೇಳಿದರು. ಆ ವ್ಯಾಪಾರಸ್ಥ ಇವರಿಗೆ ಕೆಲಸ ಕೊಟ್ಟಾಗ, ಈ ಅಜ್ಜನ ಹತ್ತಿರ ಐನೂರು ರೂಪಾಯಿ ಇದ್ದವು ಅಂತರಿ"

" ಹಾ !" ರಂಜನಾ ಚಕಿತಳಾಗಿ ಉಸಿರೆಳೆದಳು. "ಅವು ಎಲ್ಲಿ ಹೋದವಂತೆ?

"ಆಟ ಆಡುವ ಹುಡುಗರಿಗೆ ರೊಕ್ಕ ಕೊಡುತಿದ್ದನಂತೆ ! ಅದನ್ನು ನೋಡಿ ಆ ವ್ಯಾಪಾರಸ್ಥ ಮನೆಗೆ ಕರಕೊಂಡು ಬಂದು ಎಲ್ಲಾ ರೊಕ್ಕ ತಗೊಂಡು ಬಿಟ್ಟನಂತೆ!"

"ಹುಂ....! ಪಾಪ! ಭವಾನಿ, ದೈವ ಹೇಗೆ ಅದೆ ನೋಡು!"

"ಇಷ್ಟೇ ಅಲ್ಲರಿ, ಬಾಯರ...! ಈಗ ಅವನ ಮನಿಯೊಳಗೆ ನಾಯಿ ಬಿದ್ದಂತೆ ಬೀಳಬೇಕಾಗಿದೆ. ಆ ವ್ಯಾಪಾರಸ್ಥ ಹೇಳಿದ ಎಲ್ಲ ಮಾತು ಕೇಳಬೇಕು. ನೋಡಿರಿ, ಅದಕ್ಕೆ ಇಷ್ಟು ಮುದುಕ ಆದರೂ ಮನೆ; ಮನೆ ತಿರುಗತಾನೆ, ಒಮ್ಮೊಮ್ಮೆ ಹುಚ್ಚನಂತೆ ಹುಡುಗರ ಕೈಯೊಳಗೆ ರೊಕ್ಕ ಕೊಟ್ಟು ಬಂದಿದ್ದ ಅಂದರೆ, ಅವನ ಸಂಬಳದಲ್ಲಿ ವಜಾ ಆಗತದರಿ...." "ಹೌದೆ?

ನಿಜವಾಗಿ? ಪಾಪ!" ಕೊನೆಯ ವಾಕ್ಯವು ರಂಜನಾಳಿಗೆ ಸಂಬಂಧಿಸಿ ಬಂದುದ ರಿಂದ ಅವಳಿಗೆ ಅತ್ಯಂತ ಕೆಡುಕೆನಿಸಿತು. ಒಮ್ಮೆಲೆ ಮನವು ಕುಗ್ಗಿತು. ಆ ವ್ಯಕ್ತಿಯ ಹಿಂದೆ ಇಷ್ಟು ಕತೆ ಇರುವದೆಂಬುದು ಅವಳಿಗೆ ಗೊತ್ತಿರಲಿಲ್ಲ. ಆದರೂ ಅವನು ಎಷ್ಟು ನಗುತ್ತ ಇರುವನಲ್ಲಾ? ಇದನ್ನು ನೆನೆದಾಗ ಅವಳ ಮೈ ಜುಮ್ಮೆಂದಿತು. ರಂಜನಾ ಭವಾನಿಗೆ ಹೇಳಿದಳು "ಯಾಕೋ ಐದಾರು ದಿನವಾಯಿತು ಇತ್ತಕಡೆಗೆ ಬಂದೇ ಇಲ್ಲಾ. ನಾಳೆ ಏನಾದರೂ ಅತ್ತಕಡೆ ಹೋದರೆ ಏಕೆ ಬಂದಿಲ್ಲ ಕೇಳಿಕೊಂಡ ಬಾ, ಆ್ಞ?"

ಆ ಬಡವನಾದ ದುಃಖಮಯಿ ಅಜ್ಜನಿಗೆ ಏನಾದರೂ ನೆರವು ನೀಡಬೇಕೆಂದು ರಂಜನಾ ಮನಸ್ಸು ಮಾಡಿದಳು. ನಿರಂಜನನ ವಸೀಲಿಯಿಂದ ಹಗುರಾಗಿ ಇರುವ ಯಾವುದಾದರೂ ಕೆಲಸವನ್ನು ಕೊಡಿಸಬೇಕು; ಅವನು ವಿರಾಮದಿಂದ ಕಾಲಕಳೆಯುವಂತೆ ಮಾಡಬೇಕು; ಒಂದು ವೇಳೆ ನಿರಂಜನನ ಮನಸ್ಸಿನ ವಿರುದ್ಧವಾದರೂ ಇದನ್ನು ಮಾಡಿಸಬೇಕು; ಎಂದು ತನ್ನಷ್ಟಕ್ಕೆ ತಾನೇ ನಿರ್ಧರಿಸಿಕೊಂಡಳು.

ರಾತ್ರಿ ಏಕಾಂತದಲ್ಲಿ ವಿಲಾಸ ಸಮಯದಲ್ಲಿ ರಂಜನಾ ನಿರಂಜನನ್ನು ಕೇಳಿದಳು. "ನನ್ನದೊಂದು ಕೆಲಸವಾಗಬೇಕಾಗಿದೆ. ಅದನ್ನು ಮಾಡಿಸಿ ಕೊಡುವಿರಾ?" "ಏನಾಗಬೇಕಾಗಿದೆ? ಕೆಲಸದ ಹೆಸರು ಹೇಳು ಅಂದರೆ ಏನಾ ದರೂ ಉತ್ತರಕೊಡಬಲ್ಲೆ."

"ಇಲ್ಲ, ಹೂಂ. ಎಂದು ಹೇಳಿದರೇನೆ ಹೇಳುವೆ. ನೋಡಿರಿ, ನನ್ನ ಮತ್ತು ನಿಮ್ಮ ಹೆಸರಿನ ನಡುವೆ ಏನು ಅಂತರವಿದೆ? ಈ 'ನಿ' ಅಕ್ಷರವೊಂದೇ ಈಗ ನೀನೂ ಇಂದು ಅಡ್ಡಬರಬಾರದು ಅಂದರೆ ಆ ಕೆಲಸ ಹೇಳುವೆ."

'ನೀ' ಅಂದರ "ನೋ" ಎಂದು ನನ್ನ ಬಾಯಲ್ಲಿ ಎಂದೂ ಬರುವದಿಲ್ಲ ಹೇಳು ಬೇಗ ಹೇಳು."

"ನನ್ನ ಮಂಗಳ ಸೂತ್ರ ಮುಟ್ಟಿ ಆಣೆ ಮಾಡಿರಿ."

"ನನ್ನ ಸಿಗರೇಟ ಹೊತ್ತಿಸಲು ಸಹಾಯ ಮಾಡು!" ನಿರಂಜನನನ್ನು ತನ್ನ ವಶದಲ್ಲಿ ಸೆಳೆದು ಕೊಂಡಾಗ, ಆ ಸ್ನೇಹಮಯಜಲದಲ್ಲಿ ಇಬ್ಬರೂ ಮುಳುಗಿದಾಗ, ರಂಜನಾ ತನ್ನ ಕೆಲಸವು ಆಗುವಂತೆ ನೋಡಿ ಕೊಂಡಳು.

ಸಿಗರೇಟಿನ ಹೊಗೆ ಸುರುಳಿ, ಸುರುಳಿಯಾಗಿ ತೇಲಿ ಹೋಗುತ್ತಿರವಾಗ, ಒಬ್ಬ ಬಡಜೀವಿಗೆ ಸಹಾಯ ಮಾಡುವ ಆನಂದದ ತೆರೆಗಳ ಮೇಲೆ ರಂಜನಾ ತೇಲಿಹೋದಳು !!!

ಮರುದಿನ ಸಂಜೆ ಭವಾನಿ ಹೊರಗಿನಿಂದ ರಂಜನಾಳ ಕಡೆಗೆ ಬಂದ.

"ಬಾಯರಃ ಬಾಯರಃ ಎಂದು ಕೂಗಿದ. ರಂಜನಾ ಹೊರಗೆ ಬಂದಕೂಡಲೆ ಹೇಳಿದ– ಬಾಯರಃ ನಾನು ಆ ಅಜ್ಜನ ಕಡೆಗೆ ಹೋಗಿದ್ದೆ. ಅವ ಚೀಟಿಕೊಟ್ಟನರಿ" ತನ್ನ ರುಮಾಲದೊಳಗೆ ಮುಚ್ಚಿಟ್ಟಿದ್ದ ಆ ಪತ್ರವನ್ನು ಹಗುರಾಗಿ ತೆಗೆದು ರಂಜನಾಳ ಕೈಯ್ಯಲ್ಲಿ ಕೊಟ್ಟನು. ಆ ಪಾಕೀಟು ಭದ್ರವಾಗಿ ಮಾಡಲ್ಪಟ್ಟಿದ್ದಿತು. ಪ್ರಾಯವ್ಹೇಟ! ಅಂತ ದಪ್ಪಕ್ಷರದಲ್ಲಿ ಬರೆದಿತ್ತು. ಪತ್ರದಲ್ಲಿ ಏನಿರಬಹುದೆಂದು ಬಹಳ ತವಕಬಟ್ಟಳು. ರಂಜನಾ ಏಳೆಂಟು ಹೆಜ್ಜೆ ಮುಂದೆ ಹೋದ ಭವಾನಿ ಮತ್ತೆ ಬಂದು ಹೇಳಿದ, "ಬಾಯರ, ಆ ಅಜ್ಜ ನಿಮ್ಮ ಕೈಯಾಗೆ ಇದನ್ನು ಕೊಡಲಿಕ್ಕೆ ಹೇಳಿದನರಿ!"

ರಂಜನಾ ತನ್ನ ಕೋಣೆಯೊಳಗೆ ಹೋಗಿ ಆ ಪಾಕೀಟನ್ನು ಒಡೆದಳು. ಕಣ್ಣುಗಳು ಒಂದೇ ಸವನೆ ಓಡುತ್ತಿದ್ದವು ಆ ಅಜ್ಜನ ಪತ್ರ ಓೀಗಿದ್ದಿತು.

"ಅಮ್ಮಾ ನನ್ನನ್ನು ಎಲ್ಲರೂ ಹುಚ್ಚನೆಂದು ಕರೆಯುತ್ತಾರೆ. ನೀನೊಬ್ಬಳೇ ಇನ್ನೂ ನಾನು ಹುಚ್ಚನೆಂದು ತಿಳಿದುಕೊಂಡಂತಿಲ್ಲ. ಮಗನೇ ನನಗೆ ಓೀಗೆ ಹೆಸರಿಟ್ಟನು. ಅವನು ನನ್ನನ್ನು ಹುಚ್ಚನನ್ನು ಮಾಡಿದನು; ಜಾಣನನ್ನೂ ಮಾಡಿದನು.

"ನನಗೆ ಒಬ್ಬನೇ ಮಗ. ಅವನನ್ನು ಬಹಳ ಸಲಿಗೆಯಿಂದ ಬೆಳೆಸಿದೆ. ಅವನಿಗೆ ಯಾವದೂ ಕೊರತೆ ಮಾಡಲಿಲ್ಲ. ಬೇಡಿದ್ದನ್ನು ಕೊಟ್ಟೆ. ಬಹಳ ಸ್ವತಂತ್ರವಾಗಿ ಸ್ವಚ್ಛಂದವಾಗಿ ಅವನು ಬೆಳೆದನು. ನನ್ನ ಕಣ್ಣುಗಳಿಗೆ ಅವನು ಹಬ್ಬವಾಗಿದ್ದನು. ನನ್ನ ಈ ಪ್ರೀತಿಯೇ ನನಗೆ ಮುಳುವಾಯಿತು.

ಮಮತೆ ಮುಂದೆ ಮುಳ್ಳಾಗಿಯೂ ಹಬ್ಬುವದೆಂದು ನನಗೆ ಮೊದಲು ಅನಿಸಿರಲಿಲ್ಲ.

"ದೊಡ್ಡವನಾದ ಮೇಲೆ ಅವನು ದುಃಚಟಗಳಿಗೆ ಬಿದ್ದನು. ಕುಡಿಯುವದು, ಬಹಳ ಸಿಗರೇಟು ಸೇದುವದು ಮಾಡತೊಡಗಿದನು. ಕಾಲೇಜದ ಅಭ್ಯಾಸದಲ್ಲಿ ಏನೂ ಮನಸ್ಸು ಇರುತ್ತಿರಲಿಲ್ಲ. ಕುಂಟುತ್ತ ಅವನ ಶಿಕ್ಷಣ ನಾಗಿತ್ತು. ಅವನ ಕೆಟ್ಟ ಚಟಗಳನ್ನು ಬಿಡಿಸುವದು ಸಾಧ್ಯವಾಗಲಿಲ್ಲ. ನಾಯಿಯ ಬಾಲವೇ ಡೊಂಕ ಇದ್ದಮೇಲೆ ಏನು ಮಾಡಲು ಸಾಧ್ಯ? ಅವನಿಂದ ನನ್ನ ಹೆಸರಿಗೂ ಕುಂದು ಬರತೊಡಗಿತು.

"ಇದಕ್ಕೂ ಹೆಚ್ಚಾಗಿ ಅವನಿಗೆ ಹೆಣ್ಣಿನ ಚಟ! ಅಯ್ಯೋ ತಂದೆಯಾದ ನಾನು ನಿನ್ನಮುಂದೆ ಈ ಮಾತು ಬರೆಯುತ್ತಿದ್ದೇನೆ. ಇನ್ನು ಅವನನ್ನು ಬಿಟ್ಟು ಇರುವದೇ ಲೇಸೆಂದು, ಅವನನ್ನು ಮನೆಬಿಟ್ಟು ಹೊರಗೆ ಹಾಕಬೇಕೆಂದು ಮಾಡಿದ್ದೆ. ಆದರೆ ವಿಚಿತ್ರ ವಿಧಿ! ನಾನೇ ಮನೆಬಿಟ್ಟು ಹೊರಗೆ ಬೀಳಬೇಕಾಯಿತು.

ನನಗೆ ಹೇಳದೆಯೆ, ಕೇಳದೆಯೇ ಯಾವದೋ ಒಂದು ಹೆಣ್ಣನ್ನು ಗಂಟು ಹಾಕಿಕೊಂಡಿದ್ದ, ಅವಳು ಸುಸಂಸ್ಕೃತಳಲ್ಲವೆಂದು ಕೇಳಿದ್ದೆ. ಅವಳಿಗಾಗಿ ಮನೆಯಲ್ಲಿಯ ಹಣವನ್ನೂ, ಭಂಗಾರವನ್ನೂ, ಕಳವುಮಾಡಿಕೊಂಡು ಹೋಗಿದ್ದ. ಇದಕ್ಕಾಗಿಯೇ ಅವನು ನನ್ನ ಸಂಗಡ ಬಹಳವಾಗಿ ಜಗಳಾಡಿಬಿಟ್ಟ. ಅವನ ತಾಯಿ ಸಾಯುವ ಮುನ್ನ ಅಕ್ಕರತೆಯಿಂದ ಅವನ ಆಸ್ತಿಯನ್ನೆಲ್ಲ ಅವನ ಹೆಸರಿನಿಂದಲೇ ಬರೆಯಿಸಿಬಿಟ್ಟಳು. ನಾನು ಬಹಳ ಪರಾಧೀನನಾದೆ. ನನ್ನ ಮಗನೇ ನನ್ನ ಆನುಗೋಲು ಎಂದು ತಿಳಿದಿದ್ದೆ. ಆದರೆ...? ನನ್ನ ಮಾತುಗಳನ್ನೆಲ್ಲ ಅಲ್ಲಗಳೆದನು. ಒಂದು ದಿನ ಒಂದು ಬೆತ್ತದ ಕೋಲಿನಿಂದ ಜೋರಾಗಿ ಬೆನ್ನಮೇಲೆ ಹೊಡೆದ. ಅಯ್ಯೋ? ಆದಿನ!!!

"ಅಮ್ಮ ಆದಿನವೇ ನಾನು ಮಗನ ಆಶೆ ಬಿಟ್ಟು ಓಡಿಹೋದೆ! ಅಂದಿನಿಂದಲೂ ನಾನು ಹುಚ್ಚನಾಗಿದ್ದೇನೆ. ಮನೆಯ ಮಕ್ಕಳು ಸಂತೋಷ ಕೊಡಲಿಲ್ಲ. ನನಗೆ ಆಶ್ರಯ ಕೊಡಲಿಲ್ಲ. ಹೊರಗಿನ ಮಕ್ಕಳನ್ನು ನೋಡಿ ಆನಂದ ಪಡುತ್ತಿದ್ದೇನೆ..."

ಈ ಕ…ಯನ್ನೆಲ್ಲ ಓದಿ ರಂಜನಾ ನಿಟ್ಟುಸಿರುಬಿಟ್ಟಳು. ಈ ಮೊದಲೇ ಛವಾಸಿ ಅವನ ಕತೆ ಹೇಳಿದ್ದ. ಮತ್ತೆ ಇಷ್ಟೊಂದಿಷ್ಟು ಓದಿದ ಮೇಲೆ ಅವಳ ಮನಸ್ಸು ಬಹಳ ವಿಹ್ವಲವಾಯಿತು.

ಈ ಸಂಗತಿಯನ್ನು ಬರೆದ ಕಾಗದವನ್ನು ಮಡಿಕೆ ಹಾಕಿ ಪಾಕೀಟಿನಲ್ಲಿ ಇಡಹೋದಾಗ, ರಂಜನಾಳ ಕಣ್ಣಿಗೆ ಮತ್ತೊಂದು ಕಾಗದ ಕಣ್ಣಿಗೆ ಬಿತ್ತು. ಅದು ಬಹಳ ಚಿಕ್ಕದಾಗಿತ್ತು. ರಂಜನಾ ಅದನ್ನು ತೆಗೆದು ನೋಡಿದಳು.

"ಅವ್ವಾ, ಮೊದಲನೆಯ ಪುಟದಲ್ಲಿ ನಾನು ಏನೇನೋ ಹುಚ್ಚುಚ್ಚು ಬರೆದಿದ್ದೇನೆ. ಅವನ್ನೆಲ್ಲ ಮರೆತುಬಿಡು. ನೀನು ಈ ಅಜ್ಜನನ್ನು ಕ್ಷಮಿಸಬೇಕು. ನೀನು ಸುಸಂಸ್ಕೃತಳು ಎಂಬುದು ನನಗೆ ಗೊತ್ತು. ನಿನ್ನ ಗಂಡನನ್ನು ನೀನು ಸುಧಾರಿಸಿರುವಿ. ನನಗೆ ಬಹಳ ಕೆಟ್ಟೆನಿಸುತ್ತದೆ. ನನ್ನನ್ನು ಕ್ಷಮಿಸಬೇಕು.

"ನನ್ನ ಮಗ ಮಿಲಟರಿಗೆ ಹೋಗಿದ್ದನಂತೆ! ಅವನು ತಿರುಗಿ ಬಂದಿದ್ದಾನಂತೆ! ಅವನ ಗುರುತು ನನಗೆ ಮೊದಲು ಸಿಕ್ಕಲಿಲ್ಲ. ಮುಖವೆಲ್ಲ ಸುಟ್ಟು ಬದಲಾಗಿದ್ದಿತು...! ನಿನ್ನ ಕತೆ ಹೇಳಿದ ದಿನ ಗೇಟದಲ್ಲಿ ಅವನನ್ನು ನೋಡಿದ್ದೇನೆ!

"ನಾನು ನನ್ನ ಮೊಮ್ಮಕ್ಕಳನ್ನು ಕಂಡೆ! ನನಗೆ ಬಹಳ ಸಂತೋಷ! ನನ್ನ ಕಣ್ಣಿಗೆ ಹಬ್ಬ! ನನ್ನ ಜೀವನ ಕೃತಾರ್ಥ"

ಉದಯಕುಮಾರ ತನ್ನ ತಂದೆಯನ್ನು ಹೊರಗೆ ಹಾಕಲಿಕ್ಕಿಲ್ಲವಷ್ಟೇ ರಂಜನಾ?

ನಿನ್ನ ಮಾವ,

ಈ ಚೀಟಿಯನ್ನು ಓದಿದ ಮೇಲೆ, ರಂಜನಾಳ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ತಾನು ಏನು ಓದುತ್ತಿರುವೆನೆಂಬುದೇ ಆವಳಿಗೆ ತಿಳಿಯುಲಿಲ್ಲ. ತನ್ನ ತಲೆಯನ್ನು ಗಟ್ಟಿಯಾಗಿ ಒತ್ತಿಕೊಂಡಳು!

ಎಂಥ ದಾರುಣವಾದ ಸತ್ಯಸಂಗತಿ!! ನಿರಂಜನ ಎಷ್ಟು ಸುದ್ದಿ ಇವಳಿಂದ ಮರೆಮಾಚಿ ಇಟ್ಟುಗೊಂಡಿದ್ದ! ತನಗೆ ತಂದೆಯೇ ಇಲ್ಲವೆಂದು

ಹೇಳಿದ್ದ. ಎಷ್ಟು ನಿಷ್ಕರುಣಿ! ರಂಜನಾಳ ಎದೆ ಸಿಟ್ಟಿನಿಂದ ಕುದಿಯತೊಡಗಿತು. ನಿರಂಜನ ಆಗ ಮನೆಯಲ್ಲಿಯೇ ಇದ್ದರೆ ಏನೇನೋ ಆಗುತ್ತಿತ್ತು!!

ಅವಳ ಮನಸ್ಸು ಸ್ಥಿಮಿತಕ್ಕೆ ಬರಬೇಕಾದರೆ ಎಷ್ಟೋ ಗಂಟೆ ಹಿಡಿಯಿತು. ಅವಳು ಆ ದಿನ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡಲಿಲ್ಲ. ಹಾಗೆ ಮಾಡಿದರೆ ನಿರಂಜನ ತನ್ನ ಮಾತಿಗೆ ಒಪ್ಪುವದಿಲ್ಲವೆಂದೂ ಅನಿಸಿತ್ತು. ಅವಳಿಗೆ ಒಂದು ಉಪಾಯ ಹೊಳೆಯಿತು.

"ರಂಜನಾ, ನಿನ್ನೆ ನೀನು ಹೇಳಿದ ಕೆಲಸ ಮಾಡಿದ್ದೇನೆ." ಎಂದು ನಿರಂಜನ ಹೊರಗಿನಿಂದ ಕಾಲಿಡುವಾಗಲೇ ಉಬ್ಬಿನಿಂದ ಹೇಳಿದ.

ರಂಜನಾ ಮುಖದ ಮೇಲೆ ಸಂತೋಷವನ್ನು ವ್ಯಕ್ತಪಡಿಸುತ್ತ 'ಚೆನ್ನಾಯಿತು' ಎಂದಳು. ಹಾಗಾದರೆ ಅವನು ಎಂದಿನಿಂದ ಬರಬೇಕು?

"ಬೇಕಾದಾಗ, ಬೇಕಾದರೆ ನಾಳಿನಿಂದಲೇ ಬರಲಿ" ನಿರಂಜನ ತನ್ನ ಕೋಟನ್ನು ತೆಗೆಯುತ್ತ ಹೇಳಿದ.

"ನಾಳೆ ನಾವೇ ನಮ್ಮ ಕಾರನ್ನು ತೆಗೆದುಕೊಂಡು ಹೋಗಿ ಅವನನ್ನು ಕರೆತರಬೇಕು!"

"ಏಕೆ? ಅದೇನು ಅಂತಹದು?"

"ಇಲ್ಲ, ಪಾಪ! ಅವನಿಗೆ ಮೈಯ್ಯಲ್ಲಿ ಚೆನ್ನಾಗಿಲ್ಲವಂತೆ! ಭವಾನಿ ಅವನ ಮನೆಗೆ ಹೋಗಿದ್ದ ಅವನೇ ಹೇಳಿದ."

"ರಂಜನಾ, ನೀನು ಹೇಳಿದ ಮಾತಿಗೆ 'ನೋ' ಇಲ್ಲವೆಂದು ನಿನ್ನೆಯೇ ಹೇಳಿಲ್ಲವೇ? ನಡೆ, ಇಬ್ಬರೂ ಕೂಡಿ ನಾಳೆ ಮಾರ್ನಿಂಗ ಟ್ರಿಪ್ ಮಾಡೋಣ!"

ರಂಜನಾ ಒಮ್ಮೆಲೇ ಯಾವದೋ ನಾಟಕದ ಸೂತ್ರಧಾರಿಯಾಗಬೇಕಾಯಿತು. ಮೃದುಸ್ವಭಾವದವಳಾದ ಅವಳ ಮೇಲೆ ಇಂಥ ಭಾರ ಬೀಳುವದೆಂದು ಅವಳಿಗೆ ಕನಸು ಮನಸಿನಲ್ಲಿಯೂ ಅನಿಸಿರಲಿಲ್ಲ.

ರಾತ್ರಿ ನಿರಂಜನ ಸ್ವಸ್ಥವಾಗಿ ನಿದ್ದೆ ಹೋಗಿದ್ದ, ರಂಜನಾಳಿಗೆ ಮಾತ್ರ ಮುಂದೆ ಏನಾಗುವದೋ ಎಂದು ಮನಸಿನಲ್ಲಿ ಡವಡವಿಕೆ !

ಅವಳಿಗೆ ನಿದ್ರೆಯೇ ಬರಲಿಲ್ಲ. ಸೂರ್ಯೋದಯವಾಗುವದರೊಳಗೆ ಅವಳು ತನ್ನ ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತಿದ್ದಳು.

ಬೆಳಗಿನ ಎಂಟು ಗಂಟೆ! ಕಾರು 'ಅಜ್ಜನ ಮನೆ'ಯ ಎದುರು ನಿಂತಿತು; ಆ ವ್ಯಾಪಾರಿಯು ಓಡಿಬಂದು, ಸಾಹೇಬರಿಗೆ ಸಲಾಮು ಮಾಡಿ "ಏನು ತಾವು ಬಂದಿರಿ ?" ಎಂದು ಕೇಳಿದನು.

"ಪೇಪರ ಕೊಡುವ ಆ ಅಜ್ಜ ನಿಮ್ಮಲ್ಲಿಯೇ ಇದ್ದಾನಲ್ಲವೇ ?" ನಿರಂಜನ ಕೇಳಿದ.

ವ್ಯಾಪಾರಿಯ ಧ್ವನಿ ನಡುಗಹತ್ತಿತು. ನಾಲಿಗೆಯಿಂದ ಮಾತು ಹೊರಡದಾದವು. ಅವನಿಗೆ ಅವನದೇ ಟುಕಟುಕಿ, ಮಿಲಟರಿ ಮನುಷ್ಯನೇ ಅವನ ಮನೆಗೆ ಬಂದದ್ದರಿಂದ; ದೀನತೆಯಿಂದ ಕೈಮುಗಿಯುತ್ತ ಹೇಳಿದ "ಸಾಹೇಬರೆ, ನನ್ನದೇನೂ ಇದರಲ್ಲಿ ತಪ್ಪಿಲ್ಲ..........."

"ಹಾಗಲ್ಲ, ಅವನು ಇಲ್ಲಿ ಇದ್ದಾನಲ್ಲವೇ ?" ನಿರಂಜನ ಮತ್ತೆ ತಿದ್ದಿ ಪ್ರಶ್ನೆ ಕೇಳಿದ.

"ಆದೇ ಸಾಹೇಬರೆ, ಇಂದೇ ಬೆಳಿಗ್ಗೆ ತಾನೇ ಓಡಿಹೋಗಿಬಿಟ್ಟಾನೆ. ನಾನು ಅವನಿಗೆ ಏನೂ ಮಾಡಿಲ್ಲರಿ, ಸಾಹೇಬರೇ"

"ಎಲ್ಲಿಗೆ ಹೋದ ?" ರಂಜನಾ ಪ್ರಶ್ನಿಸಿದಳು.

ನಿನ್ನೆ ರಾತ್ರಿ ಬಹಳೇ ಬಡಬಡಿಸಿದ ಏನೇನೋ ಹಿಂದಿನದು ಹೇಳು ತ್ತಿದ್ದ. ನಾಲ್ಕೈದು ದಿನ ಅವನ ಮೈಯ್ಯಲ್ಲಿ ನೆಟ್ಟಗೇ ಇದ್ದಿಲ್ಲ. ಕೆಲಸಮಾ ಡುವದು ಬಿಟ್ಟುಬಿಟ್ಟಿದ್ದ, ಇಂದು ಬೆಳಿಗ್ಗೆ ಎದ್ದು ನೋಡಿದೆ ತಲಬಾಗಲು ತೆರೆದಿತ್ತು. ಕೋಣೆಯಲ್ಲಿ ಅವನೂ ಇಲ್ಲ, ನಾನು ಎಲ್ಲ ಕಡೆಗೂ ಅವನನ್ನು ಹುಡುಕಿದೆ ಸಿಕ್ಕಲಿಲ್ಲ. ಇನ್ನು ಸ್ಟೇಶನ್ನೊಂದು ನೋಡಬೇಕು. ನಾನೂ ಈಗ ಅಲ್ಲಿಗೇ ಹೊರಟಿದ್ದೆ."

ಕಾರು ಭರ್ರನೇ ನಿಲ್ದಾಣಕ್ಕೆ ಹೋಯಿತು; ನಿಲ್ದಾಣದಲ್ಲಿ ಸ್ಟೇಶನ್ ಮಾಸ್ತರ ನಿರಂಜನನನ್ನು ಬರಮಾಡಿಕೊಂಡು ಹೇಳಿದ—"ನೋಡಿರಿ ಇಂದು ಬೆಳಗಿನ ಐದು ಗಂಟೆಯ ಗಾಡಿಗೆ ಒಬ್ಬ ಮುದುಕ ಓಡಿ ಬಂದ. ಗಾಡಿ

ಅದೇ ಬಿಡುತ್ತಿತ್ತು. ಅವನು ಗಡಿಬಿಡಿಯಿಂದ ಹತ್ತಿಯೇ ಬಿಟ್ಟ. ಅವನು ಎಲ್ಲಿಗೆ ಹೋದನೋ ಗೊತ್ತಿಲ್ಲ. ಅವನು ಹತ್ತುವಾಗ ಈ ಬಡಿಗೆ ಮಾತ್ರ ಕೆಳಗೆ ಬಿತ್ತು. ಅದು ಇಲ್ಲೇ ಇದೆ ನೋಡಿರಿ".

ರಂಜನಾ ಅದನ್ನು ನೋಡಿದಳು ! ಅವಳ ತಂದೆ ಮೋಜಿಗಾಗಿ ಕೊರೆದ ಅಕ್ಷರ ಅದರ ಮೇಲ್ಭಾಗದಲ್ಲಿ ಇದ್ದವು !! ರಂಜನಾ ಚಕಿತಳಾಗಿ ಅಂದಳು " ಓ ! ಇದು ನನ್ನ ತಂದೆಯ ಆನುಗೋಲು ನಿಮ್ಮಕಡೆಗೆ ಕೊಟ್ಟಿದ್ದು.

ರಂಜನಾ ಮತ್ತು ನಿರಂಜನ ಇಬ್ಬರೂ ಶೂನ್ಯವಾಗಿ ಒಬ್ಬರನ್ನೊಬ್ಬರು ನೋಡಿದರು !

ಅದೇ ಕೋಲಿನಿಂದ ತನ್ನ ತಂದೆಗೆ ಹೊಡೆದ ಭಯಂಕರವಾದ ಚಿತ್ರ ನಿರಂಜನನ ಕಣ್ಣೆದುರು ಸುಳಿಯಿತು !!

ತಂದೆಗೆ ಮುದಿ ವಯಸ್ಸಿನಲ್ಲಿ ಮಕ್ಕಳು ಆನುಗೋಲಾಗಿ ಬದುಕದಿದ್ದರೆ, ಏನು ಪ್ರಯೋಜನ ? ಕೈಮೀರಿಹೋದ ಆ ಪ್ರಸಂಗವನ್ನು ನೆನೆದು ಅವರಿಬ್ಬರ ಹೃದಯಗಳು ಬಹಳ ಮರುಗಿದವು. !



ಮುಗಿದುದು.

## ★ ನನ್ನ ನೆನಿಕೆಗಳು

ಇದು ನನ್ನ ಮೂರನೆಯ ಕಥಾ ಸಂಗ್ರಹ. ಈ ಸಂಗ್ರಹದಲ್ಲಿ ಬಂದಿರುವ ಸಣ್ಣ ಕಥೆಗಳನ್ನು ಓದಿ ನನಗೆ ಪ್ರೋತ್ಸಾಹನೆ ಕೊಟ್ಟ ೮ಂ. ಶ್ರೀ ಮುಗಳಿ ಮತ್ತು ದೇಸಾಯಿ ದತ್ತಮೂರ್ತಿಯವರಿಗೆ ಕೃತಜ್ಞನಾಗಿದ್ದೇನೆ. ಇಲ್ಲಿರುವ ಹಲವು ಕತೆಗಳು ಈಗಾಗಲೆ ಜಯಹಿಂದ, ಕರ್ಮವೀರ, ಕಲ್ಪನಾ, ಜಯ ಕರ್ನಾಟಕ ಈ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆ ಪತ್ರಿಕೆಗಳ ಸಂಪಾದಕರಿಗೆ ನನ್ನ ನೆನಿಕೆಗಳು ಸಲ್ಲುತ್ತವೆ. ಸಣ್ಣ ಕಥೆಗಳನ್ನು ಬರೆಯುವುದರಲ್ಲಿ ನುರಿತವರಾದ, ಹಿರಿಯ ಸಾಹಿತಿಗಳಾದ ಶ್ರೀ. ಬೆಟಗೇರಿ ಕೃಷ್ಣಶರ್ಮರು ನನ್ನ ಈ ಕಥಾಸಂಗ್ರಹಕ್ಕೆ ಸ್ವಸಂತೋಷದಿಂದ ಬೇಗನೇ ಮುನ್ನುಡಿಬರೆಯಲು ಒಪ್ಪಿಕೊಂಡರು. ಅವರ ಹರಕೆ ನನಗೆ ನಿಜವಾಗಿಯೂ ಪ್ರೋತ್ಸಾಹನೆ ಕೊಟ್ಟಿದೆ. ಮುಖಪುಟವನ್ನು ಅಂದವಾಗಿ ಕಾಣುವಂತೆ ಮಾಡಲು ಚಿತ್ರವನ್ನು ತೀವ್ರದಲ್ಲಿ ತಯಾರಿಸಿ ಕೊಟ್ಟವರು ನನ್ನ ಮಿತ್ರರಾದ ಶ್ರೀ. ಸಿಗ್ಗಾಪಿಯವರು. ಅವರ ಉಪಕಾರವನ್ನು ಸ್ಮರಿಸಿದಷ್ಟು ಕಡಿಮೆಯೆ! 'ಬಾಗಿಲು ತೆರೆದಿತ್ತು' ಹೊತ್ತಿಗೆಯ ಪ್ರಕಟಣೆಯು ಭಾರಹೊತ್ತು, ನನಗೆ ಬಹಳ ನೆರವಾದ ಮೊಂಬಾಳ ಬಂಧುಗಳಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಅವರ ಒಲವಿನ ಸಹಾಯವಿರದಿದ್ದರೆ, ನನ್ನ ಈ ಕಥೆಗಳು ಬಾಗಿಲು ಮುಚ್ಚಿಕೊಂಡೇ ಇರುತ್ತಿದ್ದವು.

—ವರದರಾಜ ಹುಯಿಲಗೋಳ.

## ನೀರದ ಸಾಹಿತ್ಯ ಮಂದಿರದಲ್ಲಿ ದೊರೆಯುವ ಗ್ರಂಥಗಳು



| | | | |
|---|---|---|---|
| (೧) | ಫಲಸಂಚಯ | ವರದರಾಜ ಹುಯಿಲಗೋಳ | ೧—೮—೦ |
| (೨) | ಚಂದ್ರತಾರೆ | ,, | ೧—೪—೦ |
| (೩) | ಬಾಗಿಲು ತೆರೆದಿತ್ತು | ,, | ೧—೪—೦ |
| (೪) | ಹಿಗ್ಗು | ವಿ. ಕೃ. ಗೋಕಾಕ | ೧—೨—೦ |
| (೫) | ನವ್ಯ ಕವಿತೆಗಳು | ,, | ೦—೧೨—೦ |
| (೬) | ಅಪಾರ ಕರುಣೆ | ರಂ. ಶ್ರೀ ಮುಗಳಿ | ೧—೦—೦ |
| (೭) | ಓಂ ಅಶಾಂತಿ | ,, | ೧—೦—೦ |
| (೮) | ನಾಮಧಾರಿ (ನಾಟಕ) | ,, | ೦—೨—೦ |
| (೯) | Heritage of Karnatak Culture | ,, | ೪—೦—೦ |
| (೧೦) | ವರುಣ | ಪೇಜಾವರ ಸದಾಶಿವರಾವ | ೧—೪—೦ |
| (೧೧) | ಸಂತಾನ | ಸು. ರಂ. ಯಕ್ಕುಂಡಿ | ೧—೪—೦ |
| (೧೨) | ಲೇಖನ ಕಲೆ | ಮಿರ್ಜಿ ಅಣ್ಣಾರಾಯರು | ೨—೪—೦ |
| (೧೩) | ಜೈನಧರ್ಮ | ,, | ೧೫—೦—೦ |
| (೧೪) | ರಾಮಣ್ಣ ಮಾಸ್ತರ | ,, | ೧—೦—೦ |
| (೧೫) | ವಿಜಯಶ್ರೀ | ,, | ೧—೦—೦ |
| (೧೬) | ಮೂಲಶಿಕ್ಷಣ ಮೌಲ್ಯ ಮಾಪಣ | ,, | ೦ ೧೨—೦ |
| (೧೭) | ಭರತೇಶ ವೈಭವ ಶೋಭನ ಸಂಧಿಗಳು | ,, | ೧—೦—೦ |
| (೧೮) | ಆಂಡಯ್ಯ | (ಸಂಪಾದಕರು- ರಂ. ಶ್ರೀ ಮುಗಳಿ) | ೧—೮—೦ |

ಈ ಪುಸ್ತಕಗಳಿಗಾಗಿ ಬರೆಯಿರಿ—

**ನೀರದ ಸಾಹಿತ್ಯ ಮಂದಿರ, ಸಾಧನಕೇರಿ, ಧಾರವಾಡ.**